# ಸಪ್ತಗಿರಿ

1999

4/-

**ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ, ಮಾಸಪತ್ರಿಕೆ**






# ಗುಣಾತ್ಮಕ ಸ್ಪರ್ಶ

## ತಿರುಮಲೆ - ತಿರುಪತಿ ದೇವಸ್ಥಾನಗಳವರು ಆರಂಭಿಸಿರುವ

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನೀ ಯೋಜನೆ

ಪ್ರಾಚೀನ ಕಾಲದಿಂದಲೂ ತಿರುಮಲೆಯ ಒಂದು ಮಹತ್ವದ ಯಾತ್ರಾಕ್ಷೇತ್ರವಾಗಿದ್ದು ಪ್ರತಿದಿನವೂ ಸಾವಿರಾರು ಮಂದಿ ಯಾತ್ರಿಕ ಭಕ್ತರು ಆಗಮಿಸಿ ಶ್ರೀ ವೆಂಕಟೇಶ್ವರಸ್ವಾಮಿಯಲ್ಲಿ ತಮ್ಮ ಐಹಿಕ ಆಧ್ಯಾತ್ಮಿಕ ಕ್ಷೇಮ ಲಾಭಗಳಿಗಾಗಿ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ

ಯಾತ್ರಿಕ ಸೇವೆಯಲ್ಲಿ ಸಮರ್ಪಿತವಾಗಿರುವ ತಿ ತಿ ದೇವಸ್ಥಾನಗಳ ಮಾನವಸೇವೆಯ ಒಂದು ಭಾಗವೇ ರೋಗ ಚಿಕಿತ್ಸೆ, ತಿ ತಿ ದೇವಸ್ಥಾನಗಳು ಈಗಾಗಲೇ ಒಂದು ಕುಷ್ಠರೋಗ ನಿವಾರಣಾಕೇಂದ್ರ, ವಿಕಲಾಂಗ ಚಿಕಿತ್ಸಾ ಆಸ್ಪತ್ರೆ, ಅನಾಥಾಲಯ, ಕೇಂದ್ರ ಆಸ್ಪತ್ರೆಗಳನ್ನು ನಿರ್ವಹಿಸುತ್ತಿವೆ ಅಗತ್ಯವಿರುವ ಬಡ ರೋಗಿಗಳ ಸೇವೆಗೆಂದು ದೆಹಲಿ, ಪಾಂಡಿಚೇರಿ, ಚಂದಿಗಢಗಳಲ್ಲಿರುವಂತೆ, ಅತ್ಯಾಧುನಿಕ ಯಂತ್ರೋಪಕರಣಗಳಿಂದ ಕೂಡಿದ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ - ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ (ಸ್ವಿಮ್ಸ್) ಅನ್ನು ಸ್ವಾಮಿಯ ಆಶೀರ್ವಾದದೊಡನೆ ಆರಂಭಿಸಲಾಗಿದೆ ಇಲ್ಲಿ ವೈದ್ಯಕೀಯ ವಿಜ್ಞಾನದ ಸೇವೆ, ತರಬೇತಿ, ಶಿಕ್ಷಣಗಳನ್ನು ನೀಡುವುದೇ ಅಲ್ಲದೆ, ಸಂಶೋಧನೆ, ಅಭಿವೃದ್ಧಿಗಳನ್ನೂ ಸಾಧಿಸಲು ಅವಕಾಶ ಮಾಡಲಾಗಿದೆ

ಇಂತಹ ಅತ್ಯಾಧುನಿಕ ಯಂತ್ರೋಪಕರಣಗಳ ಆಸ್ಪತ್ರೆಯ ಅನುಕೂಲಗಳು ನಮ್ಮ ಎಲ್ಲ ಸಹೋದರರಿಗೂ ಸಿಗುವಂತಾಗಬೇಕು

ಈ ಘನ ಉದ್ದೇಶದಿಂದ ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನೀ ಯೋಜನೆಯನ್ನು ಆರಂಭಿಸಲಾಗಿದೆ ಇದರಿಂದಾಗಿ ಅಗತ್ಯವಿರುವ ಎಲ್ಲರಿಗೂ ಅನುಕೂಲಕರವಾದ ದರಗಳಲ್ಲಿ ಅತ್ಯಾಧುನಿಕ ಸೌಕರ್ಯಗಳ ಚಿಕಿತ್ಸಾ ಸೌಲಭ್ಯ ದೊರೆಯುವಂತೆ ಆಗುವುದು ಈ ಯೋಜನೆಯ ವಿವರಗಳನ್ನು ಕೆಳಗೆ ನೀಡಲಾಗಿದೆ ದಾನಿಗಳು ಉದಾರ ಹೃದಯದಿಂದ ದಾನ ನೀಡಬೇಕೆಂದು ಆಹ್ವಾನಿಸುತ್ತೇವೆ

**ಯೋಜನೆಯ ವಿವರ**

* ಸ್ವಿಮ್ಸ್‌ಗೆ ನೀಡುವ ಎಲ್ಲ ದಾನಗಳೂ 80 (ಜಿ) ಕಲಮಿನಂತೆ 100 ಶತಾಂಶ ಆದಾಯಕರ ವಿಮುಕ್ತವಾಗಿರುವುದು
* ದಾನಗಳನ್ನು ಯಾರುಬೇಕಾದರೂ - ವ್ಯಕ್ತಿ, ಕುಟುಂಬ, ಸಂಘ, ಸಂಸ್ಥೆಗಳು - ಮಾಡಬಹುದು
* ಒಂದು ಲಕ್ಷ ರೂಪಾಯಿ ಹಾಗೂ ಹೆಚ್ಚಿನ ಹಣ ನೀಡಿದವರ ಹೆಸರುಗಳನ್ನು ಆಸ್ಪತ್ರೆಯ ಸ್ವಾಗತ ಕಚೇರಿಯಲ್ಲಿ ಪ್ರಕಟಿಸಲಾಗುವುದು
* ಐದು ಲಕ್ಷ ಮತ್ತು ಹೆಚ್ಚಿನ ಹಣ ದಾನ ಮಾಡಿದವರ ಹೆಸರುಗಳನ್ನು ಕೋಣೆಗಳಿಗಿಡಲಾಗುವುದು
* ಒಂದು ಉಪವಿಭಾಗಕ್ಕೆ 15 ಲಕ್ಷ ರೂಪಾಯಿಗಳಿಗಿಂತ ಹೆಚ್ಚು ದಾನ ನೀಡಿದವರ ಹೆಸರನ್ನಿಡಬಹುದು
* 15 ಲಕ್ಷ ರೂ ಗಳಿಗೂ ಹೆಚ್ಚಿನ ದಾನ ನೀಡುವವರ ಹೆಸರಿನಲ್ಲಿ ಒಂದು ಘಟಕವನ್ನೂ ಹೆಸರಿಸಬಹುದು
* ಒಂದು ಸ್ನಾತಕೋತ್ತರ ಶಿಕ್ಷಣ ವಿದ್ಯಾರ್ಥಿನಿಲಯ, ಶಸ್ತ್ರಚಿಕಿತ್ಸಾ ಕೋಣೆ, ನರ್ಸ್‌ಗಳ ವಸತಿ ಗೃಹ, ರೋಗಿಗಳ ನೆರವಿಗರ ಸತ್ರಗಳಲ್ಲಿ ಒಂದಕ್ಕೆ - ಒಂದು ಕೋಟಿ ರೂಪಾಯಿ ನೀಡುವವರ ಹೆಸರನ್ನಿಡಬಹುದು
* ಐದು ಲಕ್ಷ ರೂಪಾಯಿಗಳ ದಾನದ ಮೂಲಕ ವರ್ಷದಲ್ಲಿ ಒಂದು ಪ್ರಮುಖ ಶಸ್ತ್ರ ಚಿಕಿತ್ಸೆಯನ್ನು ಆಗಮಾಡಿಸಬಹುದು
* ಪೂರ್ಣವಾಗಿ ಸಂಶೋಧನೆಯ ಉದ್ದೇಶದ ಪೀಠಗಳನ್ನು ಹತ್ತು ಲಕ್ಷ ರೂಪಾಯಿ ದಾನಗಳಿಂದ ಸ್ಥಾಪಿಸಬಹುದು

**ಐದು ಲಕ್ಷ - ಮತ್ತು ಹೆಚ್ಚಿನ ದಾನ ನೀಡುವವರಿಗ ತಿರುಮಲಯಲ್ಲಿ ಕಲ್ಪಿಸುವ ಸೌಲಭ್ಯಗಳು**

* ಸ್ವಾಮಿಯ ಓಲಗದಲ್ಲಿ ಆವರ್ತನ ಪದ್ಧತಿಯಲ್ಲಿ ದಾನಿಯ ಹೆಸರನ್ನು ಹೇಳಲಾಗುವುದು
* ವರ್ಷದಲ್ಲಿ ಮೂರುದಿನಗಳು ದಾನಿಯ ಕುಟುಂಬದ ಐವರಿಗೆ ಬಿಡುವಿನ ಸಮಯದಲ್ಲಿ ಆರತಿ ಸಮೇತ ಸ್ವಾಮಿ ದರ್ಶನದ ಏರ್ಪಾಡು
* ವರ್ಷದಲ್ಲಿ ಮೂರು ದಿನಗಳ ಕಾಲ ದಾನಿಯ ಕುಟುಂಬದ ಐವರಿಗ ಅತಿಗಣ್ಯ ವ್ಯಕ್ತಿಗಳ ವಸತಿಯನ್ನು ಉಚಿತವಾಗಿ ನೀಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬಂಗಾರದ ಚಿತ್ರದ ಜ್ಞಾಪಿಕಯನ್ನು ದಾನಿಗೆ ನೀಡಲಾಗುವುದು
* ದಾನಿಗಳು ಆಸ್ಪತ್ರೆಗೆ ಬೇಕಾದ ಉಪಕರಣಗಳು, ವಾಹನಗಳು, ದಾನ ನೀಡಬಹುದು ಅಪೇಕ್ಷೆ ಪಟ್ಟಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿನ ಆರೋಗ್ಯ ತಪಾಸಣಾ ಶಿಬಿರಗಳನ್ನು ನಡೆಸಲು ಮುಂದ ಬರಬಹುದು

ಮಿಕ್ಕ ವಿವಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ-

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ತಿರುಪತಿ



ಭಕ್ತಳ ಬನ್ನ ಪರಾಕು ಭಾಗ್ಯವ ನಿದಿಯೆ -ಪ-

ನಿನ್ನ ನಂಬಿದೆ ನೀರಜಾಕ್ಷ ಪರಾಕು
ನಿನ್ನ ರನ್ನೆಯ ಒಲುಮೆ ದೇಕು ಪರಾಕು
ಅನ್ನರ ಸಂಗವನೊಲ್ಲೆ ಪರಾಕು
ಎನ್ನ ಪೇಕ್ಷೆಯ ಸಲ್ಲಿಸೊ ಪರಾಕು -1-

ಶೇಷಶಯನ ಶ್ರೀನಿವಾಸ ಪರಾಕು
ಸಾಸಿರ ನಾಮದ ಒಡೆಯ ಪರಾಕು
ದೋಷ ದುರಿತಹರ ಸ್ವಾಮಿ ಪರಾಕು -2-

ರತಿಪತಿ ಪಿತ ರಮಾದವನೆ ಪರಾಕು
ಅತಿರೂಪ ಎನ್ನಯ್ಯನೆ ಪರಾಕು
ಹಿತಭಿರಹಿತರ ಕಾಯಾ ಪರಾಕು
ಕರ್ತೃ ಹೆಳವನಕಟ್ಟ ರಂಗ ಪರಾಕು -3-

**- ಹೆಳವನಕಟ್ಟೆ ಗಿರಿಯಮ್ಮನವರು.**

ಸಂದರ್ಶಿಸಿ ಆರಾಧಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ತಿರುಮಲೆ



# ವಾರ್ಷಿಕ ಬ್ರಹ್ಮೋತ್ಸವಗಳು

## 12-9-99 ರಿಂದ 21-9-99 ವರೆಗೆ

ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 12-9-99 | ಭಾನುವಾರ | | ಅಂಕುರಾರ್ಪಣೆ, ಸೇನಾಪತಿ ಉತ್ಸವ |
| 13-9-99 | ಸೋಮವಾರ | ಧ್ವಜಾರೋಹಣ | ದೊಡ್ಡಶೇಷವಾಹನ |
| 14-9-99 | ಮಂಗಳವಾರ | ಚಿಕ್ಕಶೇಷವಾಹನ | ಹಂಸವಾಹನ |
| 15-9-99 | ಬುಧವಾರ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 16-9-99 | ಗುರುವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 17-9-99 | ಶುಕ್ರವಾರ | ಮೋಹಿನೀ ಅವತಾರ | ಗರುಡವಾಹನ |
| 18-9-99 | ಶನಿವಾರ | ಹನುಮಂತವಾಹನ<br>ಸಂಜೆ ಸುವರ್ಣರಥ<br>ವಸಂತೋತ್ಸವ | ಗಜವಾಹನ |
| 19-9-99 | ಭಾನುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 20-9-99 | ಸೋಮವಾರ | ರಥೋತ್ಸವ | ಅಶ್ವವಾಹನ |
| 21-9-99 | ಮಂಗಳವಾರ | ಅವಭೃಥ, ಚಕ್ರಸ್ನಾನ | ಧ್ವಜಾವರೋಹಣ |

ಸೂಚನೆ · ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಭಗವದ್ಗೀತಾ ಪಠಣ, ಪುರಾಣ ಪ್ರವಚನ, ಧಾರ್ಮಿಕೋಪನ್ಯಾಸಗಳು, ಸಂಗೀತ, ಹರಿಕಥೆ ಮೊದಲಾದ ಭಕ್ತಿ ಕಾರ್ಯಕ್ರಮಗಳು ನಡೆಯುತ್ತವೆ ತಿ ತಿ ದೇ ಧಾರ್ಮಿಕ ಕೃತಿಗಳ ಮಾರಾಟದ ಏರ್ಪಾಡುಗಳೂ ಆಗಿರುತ್ತವೆ

ತಾವೂ ಬನ್ನಿ ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ






ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**



ವೇಂಕಟಾದ್ರಿ ಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋ ದೇವೋ ನ ಭೂತೋ ನ ಭವಿಷ್ಯತಿ

ಸಂಪುಟ 30 ಸೆಪ್ಟೆಂಬರ್ 1999 ಸಂಚಿಕೆ - 4

## ಬ್ರಹ್ಮೋತ್ಸವ ವಿಶೇಷ ಸಂಚಿಕೆ



ಮುಖಚಿತ್ರ ಶ್ರೀ ಭೂದೇವಿಯರೊಡನೆ ಶ್ರೀ ಮಲೆಯಪ್ಪಸ್ವಾಮಿ.
ಹಿಂಬದಿಯಲ್ಲಿ ತಿರುಮಲೆ ಯಲ್ಲಿ ರಥೋತ್ಸವ.




ಮನುಷ್ಯನಿಗೆ ಮಾತ್ರವೇ ಚಿಂತಿಸುವ ಪರಿಜ್ಞಾನವಿದೆ ಎಂಬುದು ಆರ್ಯವಾಕ್ಕು ಪ್ರಾಣಿಗಳೂ ಅಲ್ಲಲ್ಲಿ ಆಗಾಗ ಮನುಷ್ಯನಂತೆಯೇ ಹಲವು ಗುಣಗಳನ್ನು ಹೊಂದಿರುವಂತೆ ವೈಜ್ಞಾನಿಕವಾಗಿ ಖಚಿತವಿದ್ದರೂ ಕೂಡ, ಅವುಗಳಲ್ಲಿ ಮನುಷ್ಯನಿಗಿರುವಷ್ಟು ಸಾಂದ್ರ ಚಿಂತನ ಶೀಲತೆಯಿರುವುದಿಲ್ಲವಾಗಿ ಅದನ್ನೇ ಎಂದರೆ ಈ ಚಿಂತನಶೀಲತೆಯ ಕೊರತೆಯನ್ನೇ ಪ್ರಾಣಿಗಳನ್ನು ಮನುಷ್ಯನಿಂದ ದೇರ್ಪಡಿಸುವ ವಿಚಾರ - ಲಕ್ಷಣ ಎಂದು ನಿರ್ಧಾರಮಾಡಿದರು

ಇಲ್ಲಿ ಪ್ರಶ್ನೆ - ಮನುಷ್ಯ ಈ ಹೆಚ್ಚಾದ ಚಿಂತನಶೀಲತೆಯಿಂದ ತನಗಾಗಿ, ತನಗಿಂತ ಕೆಳಮಟ್ಟದ ಬುದ್ಧಿಜೀವಿಗಳಾದ ಪ್ರಾಣಿಗಳಿಗಾಗಿ ಏನು ಸಾಧಿಸಿದ ಎಂಬುದು ಸರಳವಾಗಿ ಕೇಳುವುದಾದರೆ - ಬುದ್ಧಿ ಜಾಸ್ತಿ ಇದೆ, ಅದರಿಂದ ಪ್ರಯೋಜನವೇನು? ಅರಿಷಡ್ವರ್ಗದಿಂದ ಆವೃತನಾಗಿ, ತಿಳಿದೂ ತಿಳಿದೂ ತತ್ಕಾಲಿಕ ಸುಖವಾದ ಐಹಿಕ, ಇಂದ್ರಿಯ ಮಟ್ಟದ ಸುಖವನ್ನೇ ಅರಸಿ ದೀಪವನ್ನು - ಅಲ್ಲ, ಬೆಂಕಿಯನ್ನು - ಹಾಯುವ ಹುಳುವಿನಂತೆ ಹಾಳಾಗುತ್ತಿರುವುದೇ ಪ್ರಯೋಜನವೇ ಅಷ್ಟಕ್ಕೇ ನಿಂತರೆ ಅದು ನಿರರ್ಥಕವೇ ಹೌದು ಆದರೆ ಮನುಷ್ಯನ ಜಿಜ್ಞಾಸೆ, ಕಾಂಕ್ಷೆ, ತಪನ - ಅಷ್ಟಕ್ಕೇ ನಿಲ್ಲದು ಇದ್ದು ಜೈಸುವ ಅದಮ್ಯ ಆಸೆಯಿಂದಾಗಿ ಒಳಗನ್ನೂ ನೋಡಿಕೊಳ್ಳುವ ಪ್ರಯತ್ನ - ಆಗಾಗ, ಅಲ್ಲಲ್ಲಿ ನಡೆಯುತ್ತದೆ. ಇನ್ನೂ ಎತ್ತರದ ತತ್ವದ ಅನ್ವೇಷಣೆಯಲ್ಲಿ ಆಕಾಶವನ್ನು ತಡಕುವ ಮನವುಂಟಾಗುತ್ತದೆ ಹೀಗೆ ತಾನು ಕಂಡುಕೊಂಡ ಸತ್ಯವನ್ನು ಇತರ ಸುತ್ತಲ ಜನಕ್ಕೂ ತಿಳಿಸಿ, ಅವರಿಗೂ ನಡೆಯಬೇಕಾದ ಹಾದಿಯ ಅರಿವು ಮೂಡಿಸಲು ಯತ್ನಿಸುತ್ತಾನೆ ಆಗಲೇ ಧರ್ಮ ಮತವಾಗುತ್ತದೆ - ಸಾಮಾಜಿಕವಾಗುತ್ತದೆ, ಸುತ್ತ ಹರಡುತ್ತದೆ

ಹೀಗೆ ಹರಡಿದ ಧರ್ಮದ ಪ್ರತೀಕಗಳೇ ಆಲಯಗಳು ಎಂದಾಗ ಅರ್ಚಾವತಾರದ ಮಹತ್ವವನ್ನೂ ತಿಳಿಯಬಹುದು ಇಂತಲ್ಲಿ ಊರವರನ್ನೆಲ್ಲಾ ಒಟ್ಟಿಗೆ ಸೇರಿಸಿ ಆಚರಿಸುವ ಆಲಯ ಉತ್ಸವಗಳ ಪಾತ್ರ ಧರ್ಮವನ್ನು ಸಾಮೂಹಿಕಗೊಳಿಸುವಲ್ಲಿ, ಮೌಲ್ಯ ಪ್ರಸಾರವಾಗಿಸುವುದರಲ್ಲಿ ಹಿರಿದಾಗುತ್ತದೆ

ಮತ್ತೆ ಬ್ರಹ್ಮೋತ್ಸವದ ಮಾತು ಉತ್ಸವಗಳಲ್ಲೆಲ್ಲ ಹಿರಿದಾದ ಉತ್ಸವ ಎಂದು ಇದನ್ನು ಬ್ರಹ್ಮೋತ್ಸವ ವೆಂದರು ಬ್ರಹ್ಮನೇ ಆರಂಭಿಸಿದ್ದು ಎಂಬುದರಿಂದ ಬ್ರಹ್ಮೋತ್ಸವ ಎಂಬುದು ತಿರುಮಲೆಯ ಆಲಯದಲ್ಲಿ ಪರಂಪರೆಯಿಂದ ನಡೆದು ಬಂದ ನಂಬಿಕೆ ತಿರುಮಲೆಯಲ್ಲಿ ನಡೆಯುವ ನಿತ್ಯೋತ್ಸವಗಳಲ್ಲಿ ಅತಿ ಆಕರ್ಷಣೆ ಹೊಂದಿ, ದೇಶಾದ್ಯಂತ ಅಸಂಖ್ಯ ಜನರು ಅತ್ಯಂತ ಆತ್ಮೀಯತೆ, ಆದರ, ಭಕ್ತಿ ಗೌರವಗಳಿಂದ ಆಗಮಿಸಿ ಭಾಗವಹಿಸುವ ಉತ್ಸವವಾಗಿದೆ ಇಂತಲ್ಲಿ ಸಾಮಾಜಿಕ ಮೌಲ್ಯಗಳ ಮಾನವೀಯ ಧರ್ಮದ ಸುಳಿವು ಸೂಕ್ಷ್ಮಗಳ ಹೊಗರು, ಹೊಳವುಗಳು ಹೆಚ್ಚುತ್ತವೆ

ಈ ಬಾರಿ ಎರಡು ಬ್ರಹ್ಮೋತ್ಸವಗಳು - ಸೆಪ್ಟಂಬರಿನಲ್ಲಿ ಹಾಗೂ ಅಕ್ಟೋಬರಿನಲ್ಲಿ ಧ್ವಜಾರೋಹಣ ಧ್ವಜಾವರೋಹಣಗಳು ಮಾತ್ರ ಎರಡನೆಯ ಬ್ರಹ್ಮೋತ್ಸವಗಳಲ್ಲಿರುವುದಿಲ್ಲ ಮಿಕ್ಕಂತೆ ಒಂದರಂತೆಯೇ ಮತ್ತೊಂದೂ ಸಾಂಗವಾಗಿ ಸಾಗುವಂತಹುವು ಭಕ್ತ ಯಾತ್ರಿಕರಿಗೆ ಎರಡೆರಡು ಅವಕಾಶವುಂಟು ಸ್ವಾಮಿಯನ್ನು ವ್ಯವಸ್ಥಿಕವಾಗಿ ದರ್ಶಿಸುವ ಏರ್ಪಾಡುಗಳನ್ನು ಕೂಲಂಕಷವಾಗಿ ಯೋಜಿಸಲಾಗಿದೆ ಈ ಅವಕಾಶವನ್ನು ಬಳಸಿಕೊಳ್ಳಲು ಭಕ್ತವೃಂದವನ್ನು ಸಪ್ತಗಿರಿ ಹಾರ್ದಿಕವಾಗಿ, ಆದರದಿಂದ ಆಹ್ವಾನಿಸುತ್ತದೆ

ಯಾತ್ರಿಕರು ಈ ಬ್ರಹ್ಮೋತ್ಸವ ಸಮಯದಲ್ಲಿ ಎಂದಿಗಿಂತ ಹೆಚ್ಚಿಗೆ ಆಗಮಿಸುತ್ತಾರೆ ಎಂಬುದರಲ್ಲಿ ಎರಡು ಮಾತಿಲ್ಲ ಅವರ ಅಗತ್ಯಗಳಿಗೆ ತಕ್ಕಂತೆ ಹೆಚ್ಚಿದ ವಾಹನ ವ್ಯವಸ್ಥೆ, ಹೆಚ್ಚಿದ ರಕ್ಷಣಾವಲಯಗಳು, ಹೆಚ್ಚಿದ ಆರೋಗ್ಯ ನೈರ್ಮಲ್ಯದ ವ್ಯವಸ್ಥೆಗಳು ನಡೆದಿವೆ ಸರತಿಯ ಸಾಲಿನ ಕೋಣೆಗಳಲ್ಲಿಯೂ, ಹೊರಗಡೆಯ ಸಾಲುಗಳಲ್ಲಿಯೂ ಅಲ್ಪೋಪಹಾರ, ಪಾನೀಯಗಳ ವ್ಯವಸ್ಥೆಗಳೂ ಉಂಟು, ಹೀಗೆ ಹಲವು ದಿಕ್ಕಿನ ಅನುಕೂಲಗಳೊಡನೆ ದಿನವೂ ಬೆಳಗಿನಿಂದ ರಾತ್ರಿಯವರೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳೂ ಏರ್ಪಾಡಾಗಿವೆ ಯಾತ್ರಿಕ ಭಕ್ತರ ಧಾರ್ಮಿಕ, ಆಧ್ಯಾತ್ಮಿಕ ದಾಹವನ್ನು ತಣಿಸುವ ಏರ್ಪಾಡುಗಳು ನಡೆದಿವೆ ಇವೆಲ್ಲದರ ಪ್ರಯೋಜನ ಪಡೆದು ಸ್ವಾಮಿಯ ದರ್ಶನ ಸುಖಕರವಾಗಲಿ ಎಂದು ಹಾರ್ದಿಕ ಹಾರೈಕೆಯ ಶುಭಾಹ್ವಾನ

# ಹರಿದಾಸರು - ಶ್ರೀನಿವಾಸ

- ಎಸ್. ಕೆ. ಆಚಾರ್.

ವೈಕುಂಠಂ ವಾ ಪರಿತ್ಯಕ್ಷ್ಯೇನ
ಭಕ್ತಾಂತ್ಯಸ್ತುಮುಚ್ಚತೇ

ವೈಕುಂಠವನ್ನಾದರೂ ಬಿಟ್ಟೇನು, ಆದರೆ ನನ್ನನ್ನು ನಂಬಿದ ಭಕ್ತರನ್ನು ಬಿಡಲಾರೆ - ಇದು ಶ್ರೀಹರಿಯು ಭಕ್ತರಿಗೆ ನೀಡಿದ ಅಭಯವಾಣಿ

ಆದ್ಯಂ ಸ್ವಯಂ ವ್ಯಕ್ತಮಿದಂ
ವಿಮಾನಂ ರಂಗಸಜ್ಞಿತಂ
ಶ್ರೀಮುಷ್ಣಂ ವೆಂಕಟಾದ್ರಿಶ್ಚ
ಸಾಲಿಗ್ರಾಮ ಶ್ಚ ನೈಮಿಷಂ
ತೋತಾದ್ರಿಪುಷ್ಕರಂ ಚೈವ
ನರನಾರಾಯಣಾಶ್ರಮಂ
ಅಷ್ಟಮೇ ಮೂರ್ತಯಃ ಸಂತಿ
ಸ್ವಯಂವ್ಯಕ್ತಾ ಮಹೀತಲೇ

ಪುಣ್ಯ ಭೂಮಿ ಭಾರತದಲ್ಲಿ ಶ್ರೀಹರಿಯು ಎಂಟು ಕ್ಷೇತ್ರಗಳಲ್ಲಿ ಸ್ವಯಂಪ್ರಕಟನಾಗಿದ್ದಾನೆ ಅವೆಂಥವೆಂದರೆ ೧) ರಂಗನಾಥ ಕ್ಷೇತ್ರ - ಶ್ರೀರಂಗ, ೨) ಶ್ರೀಮುಷ್ಣಭೂವರಾಹ, ೩) ವೆಂಕಟಾದ್ರೀಶ - ಶ್ರೀನಿವಾಸ, ೪) ಸಾಲಿಗ್ರಾಮ ಕ್ಷೇತ್ರ - ಗಂಡಕಿನದಿ, ೫) ನೈಮಿಷಾರಣ್ಯ ೬) ತೋತಾದ್ರಿನಾರಾಯಣ ಕ್ಷೇತ್ರ, ೭) ತೀರ್ಥರಾಜ ಪುಷ್ಕರ, ೮) ನರನಾರಾಯಣಾಶ್ರಮ ಬದರಿ.

ಶ್ರೀಮನ್ನಾರಾಯಣನು ಸ್ವಯಂ ವ್ಯಕ್ತವಾದ ತಿರುಪತಿ ಕ್ಷೇತ್ರದ ಮಹಿಮೆ ವರಾಹ ಮುಂತಾದ ಹನ್ನೆರಡು ಪುರಾಣಗಳಲ್ಲಿ ಬರುತ್ತದೆ. ಕಲಿಯುಗದಲ್ಲಿ ವೆಂಕಟಾದ್ರಿಯು, ದ್ವಾಪರದಲ್ಲಿ ಶೇಷಾದ್ರಿ, ತ್ರೇತೆಯಲ್ಲಿ ಅಂಜನಾದ್ರಿ, ಕೃತಯುಗದಲ್ಲಿ ವೃಷಭಾದ್ರಿಯಾಗಿದ್ದು, ನಾಲ್ಕು ಯುಗಗಳಲ್ಲಿ ಸುಪ್ರಸಿದ್ಧ ಕ್ಷೇತ್ರವಾಗಿತ್ತು ಹಿಂದೊಮ್ಮೆ ಸರಸ್ವತೀ ನದೀತೀರದಲ್ಲಿ ಎಲ್ಲಾ ಋಷಿಗಳು ಸೇರಿ, ಸತ್ರಯಾಗ ನಡೆಸುತ್ತಿದ್ದಾಗ, ನಾರದರು ಪ್ರಶ್ನೆ ಎತ್ತಿದ ಮೂಲಕ ತ್ರಿಮೂರ್ತಿಗಳಲ್ಲಿ ಯಾರು ಶ್ರೇಷ್ಠರೆಂಬ ಜಿಜ್ಞಾಸೆಯುಂಟಾಯಿತು ಇದರ ನಿರ್ಣಯಕ್ಕಾಗಿ ಹೊರಟ ಭೃಗು ಮಹರ್ಷಿಗಳು, ಬ್ರಹ್ಮರುದ್ರಾದಿಗಳಿಂದ ಅವಮಾನಿತರಾಗಿ, ವೈಕುಂಠಕ್ಕೆ ಬಂದು ನಾರಾಯಣನ ಎದೆ ಮೆಟ್ಟಲು, ಶ್ರೀಹರಿಯು ಕುಪಿತನಾಗದೆ, ಅವರ ಪಾದವನ್ನು ತೊಳೆಯುವನು ಆಗ ಭೃಗು ಮುನಿಗಳು ತ್ರಿಮೂರ್ತಿಗಳಲ್ಲಿ ಶ್ರೀಹರಿಯೇ ಸರ್ವಶ್ರೇಷ್ಠನೆಂಬ ನಿರ್ಣಯಕ್ಕೆ ಬರುವರು. ಆದರೆ ತನ್ನ ವಾಸಸ್ಥಾನವಾದ ಶ್ರೀಹರಿಯ ವಕ್ಷಸ್ಥಳವನ್ನು ಭೃಗುಮುನಿಗಳು ಮೆಟ್ಟಿದ್ದನ್ನು ಮೆಚ್ಚದ ಮಹಾಲಕ್ಷ್ಮಿಯು, ಕುಪಿತಳಾಗಿ ಕೋಲಾಪುರದಲ್ಲಿ ಬಂದು ನೆಲೆಸುವಳು ಆಗ ಶ್ರೀಹರಿಯು ವೈಕುಂಠವನ್ನು ಬಿಟ್ಟು ಶ್ರೀಲಕ್ಷ್ಮಿಯನ್ನು ಅರಸುತ್ತಾ ಭೂಮಿಗಿಳಿದು ಬಂದು ಆಕಾಶರಾಜನ ಮಗಳಾದ ಪದ್ಮಾವತಿಯನ್ನು ವಿವಾಹವಾಗಿ ದುಷ್ಟ ಶಿಕ್ಷಣ ಹಾಗೂ ಶಿಷ್ಟ ರಕ್ಷಣೆಗಾಗಿ ಸ್ವಯಂವ್ಯಕ್ತ ಮೂರ್ತಿ ಲೋಕೇಶ ವೆಂಕಟೇಶನಾಗಿ ತಿರುಮಲೆಯಲ್ಲಿ ನಿಲ್ಲುವನು

ಅಪರೋಕ್ಷ ಜ್ಞಾನಿಗಳಾದ ರಾಮಾನುಜಾಚಾರ್ಯರು, ವ್ಯಾಸರಾಜರು, ವಾದಿರಾಜರು, ತಿರುಮಲೆಗೆ ಬಂದಾಗ, ಶೇಷಾಚಲವು ಸಾಲಿಗ್ರಾಮ ಶಿಲೆಯಾಗಿ ಕಂಡುಬರಲು, ಬೆಟ್ಟವನ್ನು ಮೆಟ್ಟದೆ, ಮೊಣಕಾಲಿನಲ್ಲಿ ಮೇಲೇರುವರು ವಾದಿರಾಜರು, ಲೋಕೇಶ ಶ್ರೀನಿವಾಸನ ಅಲಂಕಾರಕ್ಕಾಗಿ, ದೊಡ್ಡ ಸಾಲಿಗ್ರಾಮ ಹಾರವನ್ನು ಅರ್ಪಿಸುವರು ಈ ಪವಿತ್ರ ಸಾಲಿಗ್ರಾಮ ಹಾರವನ್ನು ಪಾವನಮೂರ್ತಿ ಭುವನ ಮೋಹನ ಶ್ರೀನಿವಾಸನ ಸುಂದರ ಕೊರಳಲ್ಲಿ ಕಂಗೊಳಿಸುವುದನ್ನು ನಾವು ಇಂದಿಗೂ ಕಾಣಬಹುದು ತಿರುಮಲೆಯಲ್ಲಿ ಸಾವಿರಾರು ತೀರ್ಥಗಳಿದ್ದು, ಸ್ವಾಮಿ ಪುಷ್ಕರಿಣಿಯು ಪ್ರಧಾನ ತೀರ್ಥವಾಗಿದೆ. ಏಕೆಂದರೆ ಶ್ರೀ ವೆಂಕಟೇಶ್ವರಸ್ವಾಮಿಯ, ತೆಪ್ಪೋತ್ಸವಾದಿ ಮಹೋತ್ಸವಗಳು, ಇದರಲ್ಲೇ ನಡೆಯುತ್ತವೆ ಈ ತೀರ್ಥದ ವರ್ಣನೆ ಶ್ರೀ ವೆಂಕಟೇಶ್ವರ ಸ್ತೋತ್ರದಲ್ಲಿ ಬರುತ್ತದೆ "ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠ ಮುತ್ತಮಂ ಸ್ವಾಮಿ ಪುಷ್ಕರಿಣೀ ತೀರೇ ರಮಯಾಸಹ ಮೊದತೇ, ಕಲ್ಯಾಣಾದ್ಭುತ ಗಾತ್ರಾಯ, ಕಾಮಿತಾರ್ಥ ಪ್ರದಾಯಿನೇ, ಶ್ರೀಮದ್ವೇಂಕಟನಾಥಾಯ, ಶ್ರೀನಿವಾಸಾಯತೇ ನಮಃ" - ಪರಮಾನಂದ ಸ್ವರೂಪನೂ, ಕಾಮಿತಫಲ ನೀಡುವ, ವೈಕುಂಠವನ್ನು ಬಿಟ್ಟುಬಂದ ವೆಂಕಟೇಶನು, ರಮೆಯೊಂದಿಗೆ ಮುದದಿಂದ ಸ್ವಾಮಿ ಪುಷ್ಕರಿಣಿ ತಟದಲ್ಲಿದ್ದಾನೆ ಎಂಬುದಾಗಿ ವರ್ಣಿಸಲ್ಪಟ್ಟಿದೆ



ಹದಿನೈದನೇ ಶತಮಾನದಲ್ಲಿ ಶ್ರೀನಿವಾಸನ ಅರ್ಚಕರು ನಿರ್ವಂಶರಾದಾಗ, ಚಂದ್ರಗಿರಿ





ರಾಜ್ಯದ ಅರಸು ಸ್ವಾಳುವರುಸಿಂಹನ ವಿನಂತಿ ಮೇರೆಗೆ, ಚಂದ್ರಗಿರಿ ಹಾಗೂ ವಿಜಯನಗರದ ಅರಸರ ರಾಜಗುರುಗಳಾದ ಪ್ರಹ್ಲಾದಾಂಶರಾದ ವ್ಯಾಸರಾಜರು 1486 ರಿಂದ 1498 ರ ವರೆಗೆ 12 ವರ್ಷ ಪರ್ಯಂತ, ಶ್ರೀನಿವಾಸನ ಅರ್ಚನೆ ಮಾಡುವರು. ಆಂಜನೇಯನ ಸನ್ನಿಧಾನದಿಂದ ಕೂಡಿದ, ವ್ಯಾಸರಾಜಸ್ವಾಮಿಗಳ ಆಹ್ನೀಕ ಮಂಟಪವನ್ನು, ನಾವು ಈಗಲೂ, ಸ್ವಾಮಿ ಪುಷ್ಕರಿಣಿಯ ದಕ್ಷಿಣ ತಟದಲ್ಲಿ ಕಾಣಬಹುದು. ಅದರ ಎದುರಿಗೇ, ಆಂಜನೇಯನನ್ನು ವೃಂದಾವನದ ಮೇಲೆ ಹೊತ್ತು, ವ್ಯಾಸರಾಜರ ವೃಂದಾವನವನ್ನು, ವ್ಯಾಸರಾಜ ಮಠದ ತಿರುಪತಿ ಶಾಖಾಮಠದಲ್ಲಿ ಕಾಣಬಹುದು ಇಂತಹಾ ಕಲಿಯುಗ ವರದ ವೆಂಕಟೇಶನನ್ನು ಸಂತ ಶ್ರೇಷ್ಠರಾದ, ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು, ಅನ್ನಮಾಚಾರ್ಯರು, ಪುರಂದರದಾಸರು, ಕನಕದಾಸರು, ಬಾರಿ ಬಾರಿ ಸಂದರ್ಶಿಸಿ ಹಾಡಿ, ಹೊಗಳಿ, ಅರ್ಚಿಸಿದ್ದಾರೆ. ಈ ಪವಿತ್ರ ಸಂತರು ಕಂಡ ಶ್ರೀನಿವಾಸನನ್ನು, ಅವರದೇ ಆದ ಅಮರ ವಾಣಿಯಲ್ಲಿ ಕೇಳೋಣ

1 ಧ್ರುವಾಂಶರಾದ ಶ್ರೀಪಾದರಾಜರು (ವ್ಯಾಸರಾಜರ ವಿದ್ಯಾಗುರುಗಳು) ಚಿತ್ರಿಸಿದ ಶ್ರೀನಿವಾಸ ಪ್ರಭು : "ಭೂಷಣಕೆ ಭೂಷಣ ಇದು ಭೂಷಣ ಶೇಷಗಿರಿವಾಸ ಶ್ರೀವರ ವೆಂಕಟೇಶಾ, ನಾಲಿಗೆಗೆ ಭೂಷಣ ನಾರಾಯಣ ನಾಮ, ಕಾಲಿಗೆ ಭೂಷಣ ಹರಿಯಾತ್ರೆಯು, ಆಲಯಕೆ ಭೂಷಣ ತುಲಸಿ ಬೃಂದಾವನ, ವಿಶಾಲಕರ್ಣಕೆ ಭೂಷಣ ವಿಷ್ಣುಕಥೆಯು" ಅವರು ಮುಂದುವರಿಯುತ್ತಾ ಕರಗಳಿಗೆ ದಾನ ಭೂಷಣ ಮಾನವರಿಗೆ ಮಾನ ಭೂಷಣ, ಮುನಿಗಳಿಗೆ ಜ್ಞಾನ ಭೂಷಣ, ಮಾನಿನಿಗೆ ಪತಿಭಕ್ತಿ ಭೂಷಣ ಶ್ರೀವೆಂಕಟರಂಗನ ದರ್ಶನ ಕಂಗಳಿಗೆ ಭೂಷಣ ಅವನಿಗೆ ವಂದಿಸುವ ಶಿರ ಶರೀರಕ್ಕೆ ಭೂಷಣ ತುಳಸಿ ಮಣಿಹಾರ ಕೊರಳಿಗೆ ಭೂಷಣ, ರಂಗವಿಠಲನ ನಾಮ ಎಲ್ಲಾ ಅತಿ ಭೂಷಣವೆಂದು ಘೋಷಿಸುತ್ತಾರೆ ಶ್ರೀನಿವಾಸನಾದರೂ ವೈಕುಂಠದಿಂದ ಬಂದು, ಶೇಷಾಚಲದಲ್ಲಿ ನಿಂತ, ಭಕ್ತರ ಪಾಲಿಸುವ ಅಭಯ ಪ್ರದಾಯಕ ದಯಾಕರಸಿಂಧುವಾಗಿದ್ದಾನೆ ಇಂತಹಾ ಶ್ರೀನೀವಾಸನು, ಜ್ಞಾನಿಗಳಿಗೆ ಗೋಚರನು, ಧ್ಯಾನಿಸುವವರನ್ನು ಪ್ರೀತಿಸುವನು ದೀನೋದ್ಧಾರಕ ಹಾಗೂ ದೈತ್ಯ ಸಂಹಾರಕನಾದ, ಆನಂದ ಪೂರ್ಣನು, ದುಷ್ಟ ಶಿಕ್ಷಣ ಹಾಗೂ ಶಿಷ್ಟ ರಕ್ಷಣೆಗಾಗಿ ಅನೇಕ ಅವತಾರಗಳನ್ನು ಎತ್ತುವನೆಂದು ಕೊಂಡಾಡುವರು

2 ಪ್ರಹ್ಲಾದಾಂಶ ವ್ಯಾಸರಾಜರು ಕಂಡ ಶ್ರೀನಿವಾಸ "ಪ್ರಾತಃಸ್ಮರಾಮಿ ರಮಯಾಸಹ ವೆಂಕಟೇಶಂ, ಮಂದಸ್ಮಿತಮುಖಸರೋರುಹ ಕಾಂತಿ ರಮ್ಯಂ, ಮಾಣಿಕ್ಯಕಾಂತಿ ವಿಲಸನ್ಮುಕುಟೋರ್ಧ್ವ ಪುಂಡ್ರಂ, ಪದ್ಮಾಕ್ಷಲಕ್ಷಮಣಿ, ಕುಂಡಲಮಂಡಿತಾಂಗಂ" ಎಂದು ಆರಂಭವಾಗುವ ಶ್ಲೋಕತ್ರಯಗಳಲ್ಲಿ ಶ್ರೀನಿವಾಸನನ್ನು ಈ ಪರಿಯಾಗಿ ವರ್ಣಿಸುತ್ತಾರೆ ಮಂದಹಾಸದಿಂದ ಕೂಡಿದ ಕಮಲದಂತಹಾ ಮುಖಕಾಂತಿಯಿಂದೊಪ್ಪುವ, ಮಾಣಿಕ್ಯಮಯ ಕಿರೀಟ ಉರ್ಧ್ವಪುಂಡ್ರಗಳಿಂದ ವಿಶಿಷ್ಟನಾದ ಕಮಲಾಕ್ಷಮಣಿಗಳಿಂದಲೂ, ರತ್ನ ಖಚಿತ ಕುಂಡಲಗಳಿಂದಲೂ, ಅಲಂಕೃತನಾದ ಶರೀರವುಳ್ಳ ಲಕ್ಷ್ಮೀ ಸಮೇತನಾದ ಶ್ರೀನಿವಾಸನನ್ನು ಪ್ರಾತಃಕಾಲದಲ್ಲಿ ಸ್ಮರಿಸುತ್ತೇವೆ. ಶೋಭಿಸುವ ಶಂಖಚಕ್ರಗಳನ್ನು ಕೈಯಲ್ಲಿ ಧರಿಸಿರುವ, ಭಕ್ತರಿಗೆ ಅಭಯಪ್ರದನೆನಿಸಿ, ಕಟಿ ಸ್ಥಳದಲ್ಲಿ ಕೈಯಿಟ್ಟು ನಿಂತಿರುವ, ಶ್ರೀವತ್ಸ, ಕೌಸ್ತುಭಮಣಿ, ಮತ್ತು ರತ್ನಖಚಿತ ಆಭರಣಗಳಿಂದ ಮಂಡಿತನಾದ, ಪೀತಾಂಬರವನ್ನುಟ್ಟು, ಮನ್ಮಥನಿಗಿಂತಲೂ ಹೆಚ್ಚು ಸೌಂದರ್ಯಶಾಲಿಯಾದ ಶ್ರೀನಿವಾಸನನ್ನು ಪ್ರಾತಃಕಾಲದಲ್ಲಿ ಭಜಿಸುವೆವು, ಮಣಿಗಣ ಖಚಿತನಾದ, ನೂಪುರಗಳಿಂದ ಶೋಭಿಸುವ, ಪೂರ್ಣಾನಂದ ಸ್ವರೂಪನಾದ, ಭಕ್ತರಿಗೆ ಇದೇ ವೈಕುಂಠವೆಂದು ತನ್ನ ಕರಕಮಲಗಳಿಂದ ಸೂಚಿ



ಸುವ, ಶ್ರೀನಿವಾಸನ ಶ್ರೀಚರಣಗಳಿಗೆ ಪ್ರಾತಃಕಾಲ ದಲ್ಲಿ ವಂದಿಸುವೆವೆನ್ನುವರು.

3 ವಾದಿರಾಜರು ಕಂಡಶ್ರೀನಿವಾಸ ಹೇ ಶೇಷಾಚಲವಾಸಿ ವೆಂಕಟೇಶಾ, ನೀರಜನಯನ, ನಿರ್ಮಲ ಗುಣಪೂರ್ಣ ವೆಂಕಟರನ್ನ, ನಾನು ಅನಾಥ, ನೀನೆನ್ನ ಬಂಧು, ಎನ್ನ ದೋಷಗಳನ್ನು ಎಣಿಸದೆ, ನಿರ್ದೋಷ ಪನ್ನಗವಾಸ ನನ್ನನ್ನು ನಿರಂತರ ರಕ್ಷಿಸು-ಎನ್ನುವರು ಕ್ಷರಾಕ್ಷರವನ್ನು ಮೀರಿದ ಪುರುಷೋತ್ತಮ, ಗರುಡವಾಹನ ಶ್ರೀಧರ ವೆಂಕಟ, ನಾಯಕ, ಭಕ್ತ ಜನ ಪಾಲಕಾ ಮುನೀಂದ್ರ ವಂದಿತಾ ದೇವಾ, ಅಖಿಲ ಸುರಗಣಸೇವಿತ ವೇದವೇದ್ಯ ವೆಂಕಟೇಶಾ, ನಿನಗೆ ಶರಣು ಎನ್ನುವರು ಹೇ ವೆಂಕಟೇಶಾ ಬಲಕೈಯಿಂದ ನಿನ್ನ ಪಾದಗಳನ್ನು ನಂಬಿದವರಿಗೆ ಸಂಸಾರ ತಾಪತ್ರಯ ಕೇವಲ ಕಟಿಪರ್ಯಂತವೆಂದು ಎಡಕೈಯಿಂದ ಸೂಚಿಸುತ್ತಿರುವ, ನಿನಗಿದೋ ವಂದನೆಗಳು ವೈಕುಂಠಸ್ಥಿತನೂ, ಕರುಣಾಸಮುದ್ರನೂ ಆದ ನೀನು, ಕಲಿಯುಗದಲ್ಲಿ ಕೇವಲ ನಿನ್ನ ಭಕ್ತರ ಉದ್ಧಾರಕ್ಕಾಗಿ, ಭಕ್ತರ ಚಿಂತಾಮಣಿಯಾಗಿ, ಶೇಷಾಚಲದಲ್ಲಿ ಮುಕುಟಪ್ರಾಯನಾಗಿ, ಕಂಗೊಳಿಸುತ್ತಿರುವೆ ವೈಕುಂಠದಲ್ಲಿ ಆದಿಶೇಷನ ಮೇಲೆ ಪವಡಿಸುವ ಪ್ರಭು, ನಮ್ಮನ್ನು ಅನುಗ್ರಹಿಸಲು ಧರೆಗಿಳಿದು ಬಂದು ಶೇಷಾಚಲದಲ್ಲಿರುವೆ ರಾವಣನ ವಧೆಗಾಗಿ, ರಾಮಾವತಾರ ಕಾಲದಲ್ಲಿ, ಶೇಷನು ನಿನ್ನ ಸಹಾಯಕ್ಕಾಗಿ, ನಿನ್ನ ಅನುಜ ಲಕ್ಷ್ಮಣನಾಗಿ ಬಂದ, ಕೃಷ್ಣಾವತಾರದಲ್ಲಿ ಶೇಷನು ಬಲರಾಮನಾಗಿ ನಿನ್ನ ಜತೆ ಬಂದ. ಈಗ ಭಕ್ತರ ಪವಿತ್ರತಾಣ ಶೇಷಾಚಲವೇ ನಿನ್ನ ನೆಲೆವೀಡು ನಮ್ಮನ್ನು ಸದಾ ರಕ್ಷಿಸು - ಎನ್ನುವರು ಅಭಯ ಹಸ್ತದಿಂದ ವೆಂಕಟಾದ್ರಿಯಲ್ಲಿ ನಿಂತ ವೆಂಕಟೇಶನು ಭಜಿಸಿದವರ ಇಷ್ಟಾರ್ಥಗಳನ್ನು ಪೂರೈಸುವನು. ತನಗೆ ಹಣ ಕಾಣಿಕೆ ನೀಡಿದವರ ಸಿರಿಸಂಪದ ಹೆಚ್ಚಿಸಲು, ತಾನೇ ಲಕ್ಷ್ಮೀ ಸಮೇತನಾಗಿ ಅವರಲ್ಲಿಗೆ ಬರುವನು. "ಸಮಸ್ತ ಸುಜನಾಧಾರಂ ದೋಷ ದೂರಂ ಗುಣಾಕರಂ, ಶ್ರೀವೆಂಕಟಾಚಲ ವಾಸಂ, ಶ್ರೀನಿವಾಸಂ, ಭಜೀನೀಶಂ" ಅಂದರೆ ಸಕಲ ಸಜ್ಜನರಿಗೆ ಆಶ್ರಯದಾತನಾದ ದೋಷ ರಹಿತನೂ, ಗುಣಪೂರ್ಣನೂ ಆದ ವೆಂಕಟಾಚಲಪತಿಯನ್ನು ನಾವು ಸೇವಿಸುವೆವು

4. ತಾಳ್ಳಪಾಕ ಅನ್ನಮಾಚಾರ್ಯರು ಬಣ್ಣಿಸಿದ ವೆಂಕಟನಾಥ ಅನ್ನಮಾಚಾರ್ಯರು, ತಿರುಮಲೆಯಲ್ಲೇ ನೆಲೆಸಿ, ಶ್ರೀನಿವಾಸನ ಮೇಲೆ 32 ಸಾವಿರ ಪದ್ಯಗಳನ್ನು ರಚಿಸಿದ್ದಾರೆ ತಿರುಮಲೆ ತಿರುಪತಿ ದೇವಸ್ಥಾನದ ಅಧಿಕಾರಿಗಳು ಇವರ ಆರಾಧನೆಯನ್ನು ಪ್ರತಿವರ್ಷ ಆಚರಿಸುವುದಲ್ಲದೆ, ಇವರ ಅಪ್ರಕಟಿತ ಕೃತಿಗಳನ್ನು ನಿರಂತರ ಶೋಧಿಸಿ, ಪ್ರಕಟಿಸುವ ಕಾರ್ಯಕ್ರಮವನ್ನು ನಿರಂತರ ನಡೆಸಿಕೊಂಡು ಬರುತ್ತಿದ್ದಾರೆ ಪುರಂದರದಾಸರ ಸಮಕಾಲೀನರಾದ ಇವರು, ಒಮ್ಮೆ ಪುರಂದರದಾಸರು, ಶ್ರೀನಿವಾಸನ ದರ್ಶನಕ್ಕೆ ತಿರುಮಲೆಗೆ ಬಂದಾಗ ಇವರ ಭೇಟಿ ಕೂಡಾ ನಡೆಯಿತು. ಅನ್ನಮಾಚಾರ್ಯರು ಶ್ರೀನೀವಾಸನನ್ನು ವರ್ಣಿಸುತ್ತಾ ಪರಿಪರಿ ವಿಧವಾದ ಭವರೋಗ ನಿವಾರಣೆಗೆ ಹರಿಪಾದ ಜಲ (ಶ್ರೀನಿವಾಸ ತೀರ್ಥ)ವೇ ಔಷಧ. ದುರಿತ ಕರ್ಮಗಳಿಂದ ಬಿಡುಗಡೆ ಹೊಂದಲು, ಮುರಾರಿಯ ಪೂಜೆಯೇ ಮುಖ್ಯ ಔಷಧ. ಶ್ರೀ ವೆಂಕಟಪತಿಯ ಆಶ್ರಯವೇ ನನಗೆ ನಿತ್ಯಸ್ಫೂರ್ತಿಪ್ರದನಾದ ಔಷಧ. ಹೇ ವೆಂಕಟಪತೇ ನಿನ್ನ ಸಂಕೀರ್ತನೆ ಸಂತೋಷಕರ ನಿನ್ನ ಭಜನೆಯಿಂದ ನಮ್ಮೆಲ್ಲಾ ಸಂತಾಪಗಳು ದೂರವಾಗಲಿವೆ ಎಂದು ತಿರುಮಲೇಶನ ಮಹಾಮಹಿಮೆಗಳನ್ನು ಕೊಂಡಾಡುವರು

5 ನಾರದಾಂಶರಾದ ಪುರಂದರದಾಸರು ವರ್ಣಿಸಿದ ಶ್ರೀನಿವಾಸ ಕರ್ನಾಟಕ ಸಂಗೀತ ಪಿತಾಮಹರಾದ ಪುರಂದರದಾಸರು ವ್ಯಾಸರಾಜ, ವಾದಿರಾಜ, ಹಾಗೂ ಕನಕದಾಸರ/ ಸಮಕಾಲೀನರಾಗಿ ಇವರು ಶ್ರೀಹರಿಯ ಪ್ರೇರಣೆಯಿಂದಲೇ ತಮ್ಮ ರತ್ನ ವಜ್ರ ವೈಢೂರ್ಯಗಳ ವ್ಯಾಪಾರವನ್ನು ತ್ಯಜಿಸಿ ದಾಸಪಂಥವನ್ನು ಸ್ವೀಕರಿಸಿ ನಾಲ್ಕು ಲಕ್ಷಕ್ಕೂ ಮಿಕ್ಕ ಹಾಡುಗಳನ್ನು ಕನ್ನಡದಲ್ಲಿ ರಚಿಸಿದರು ಗುರು ವ್ಯಾಸರಾಜರಿಂದ ದೀಕ್ಷೆಯನ್ನು ಪಡೆದ ಇವರು ಉಡುಪಿ, ಪಂಢರಪುರ, ತಿರುಮಲೆ, ಶ್ರೀರಂಗ - ದೇಶ ಸುತ್ತಾಡುತ್ತಾ ಪುರಂದರ ವಿಠಲ ಅಂಕಿತದಲ್ಲಿ ದೇವರ ಮೇಲೆ, ಶ್ರುತಿ, ಹಾಗೂ ಸ್ಮೃತಿಬದ್ಧವಾಗಿ ಸಮಾಜದ ಅಂಕುಡೊಂಕುಗಳನ್ನು ತಿದ್ದುತ್ತಾ ಪದ್ಯಗಳನ್ನು ರಚಿಸಿದರು ಅವರು ಶ್ರೀನಿವಾಸನನ್ನು ಕುರಿತು "ಸಾಸಿರನಾಮದ ವೆಂಕಟರಮಣಾ, ದಾಸನ ಮಾಡಿಕೋ ಎನ್ನ, ದುರ್ಬುದ್ಧಿಗಳನ್ನು ಬಿಡಿಸಿ, ನಿನ್ನ ಕರುಣಾ ಕವಚದ ರಕ್ಷಣೆ ನನಗೆ ನೀಡು, ನನಗೆ ಅಭಯ ನೀಡಿ, ನಿನ್ನ ಪಾದ ಸೇವೆ ನೀಡು" ಎನ್ನುವರು ಅವರು ಮುಂದುವರಿಯುತ್ತಾ "ಶ್ರೀನಿವಾಸಾ ನೀನೇ ಪಾಲಿಸೋ ಆಶ್ರಿತಜನಪಾಲಾ, ಗಾನಲೋಲ ಶ್ರೀಮುಕುಂದಾ ಧ್ಯಾನ ಮಾಡುವ ಸಜ್ಜನರನ್ನು ಮಾನದಿಂದ ಪರಿಪಾಲಿಸು ಹೇ ವೇಣುಗೋಪಾಲ, ಗೋವಿಂದ ವೇದವೇದ್ಯ ನಿತ್ಯಾನಂದ - ಎಂದು ಪ್ರಾರ್ಥಿಸುತ್ತಾರೆ ಪುರಂದರದಾಸರು ಇನ್ನೊಂದೆಡೆ ತೂಗಿರೆ ಕೃಷ್ಣನ, ತೂಗಿರೆ ರಂಗನ, ತೂಗಿರೆ ಅಳಗಿರಿ ಅಪ್ಪ ತಿಮ್ಮಪ್ಪನಾ, ತೂಗಿರೆ ಕಾವೇರಿ ರಂಗನಾ" ಇದು ಸಂಚಾರಕ್ರಮದಲ್ಲಿ ಅರ್ಚಿಸುತ್ತಿದ್ದ ಉಡುಪಿ ಕೃಷ್ಣ, ಪಂಢರವಿಠಲ ಪಾಂಡುರಂಗ, ಶೇಷಾಚಲ ವಾಸ ಶ್ರೀನಿ





ವಾಸ ಹಾಗೂ ಶ್ರೀರಂಗ ಕ್ಷೇತ್ರದ ರಂಗನಾಥ ಸ್ವಾಮಿಯ ವರ್ಣನೆ ಇರಬೇಕು ಇದು ಶ್ರೀ ಪುರಂದರದಾಸರ ಭಕ್ತಿಯ ಆಳ, ವಿಸ್ತಾರ ಹಾಗೂ ವೇಗಗಳಿಗೊಂದು ಉದಾಹರಣೆ ಏಕೆಂದರೆ ಮಾನವರ ಮನಸ್ಸು ಮಿಂಚಿಗಿಂತಲೂ ವೇಗವಾಗಿ ಚಲಿಸಬಲ್ಲುದಲ್ಲವೇ?

6 ಯಮಾಂಶರಾದ ಕನಕದಾಸರು ಕಂಡ ಶ್ರೀನಿವಾಸ : ಪಾಳಯಗಾರರಾದ ಕನಕದಾಸರು ಯುದ್ಧಮಾಡಿ ದೊರೆಯಾಗುವ ಕನಸು ಕಂಡಿದ್ದರು. ಇವರಿಗೂ ಯುದ್ಧದಲ್ಲಿ ವೈರಿಗಳಿಂದ ಸೋಲಾಗಲು, ಕಾಗಿನೆಲೆಯ ಆದಿಕೇಶವನು ರಕ್ಷಿಸಿ, ದಾಸವೃತ್ತಿ ಕೈಗೊಳ್ಳಲು ಸೂಚಿಸುವನು ಇವರು ಕೂಡಾ ಪುರಂದರದಾಸರಂತೆ ಶ್ರೀಹರಿಯ ಕೃಪೆಯಿಂದ ಲೌಕಿಕ ವೃತ್ತಿಯಿಂದ ವೈದಿಕ ಜೀವನಕ್ಕೆ ಪರಮಾತ್ಮನಿಂದ ಪ್ರೇರಿತರಾಗಿ ಬಂದವರು ಪುರಂದರದಾಸರ ಸಮಕಾಲೀನವರು ಹಾಗೂ ಅವರಂತೆ ಸಂಚಾರಿ ದಾಸರು. ಉಡುಪಿ ಕೃಷ್ಣ ಹಾಗೂ ತಿರುಮಲೆಯ ತಿಮ್ಮಪ್ಪನ ಮೇಲೆ ಅಪಾರ ಭಕ್ತಿ ಕುಸುಮಗಳನ್ನು ಆದಿಕೇಶವನ ಅಂಕಿತದಲ್ಲಿ ಅರ್ಪಿಸಿದ್ದಾರೆ ಅವರು ತಿರುಮಲೇಶನನ್ನು ಕುರಿತು ಎಲಾ ತಿರುಮಲೇಶ, ನೀನು ವೆಂಕಟೇಶ, ನಿನ್ನ ನಾಮಸ್ಮರಣೆಯಿಂದ ನಾನು ಬದುಕುವೆನು ಎಂದಿದ್ದಾರೆ ಮುಂದುವರಿಯುತ್ತಾ, ಬಂದವಯ್ಯಾ ಗೋವಿಂದ ಶೆಟ್ಟಿ ನಿಮ್ಮ ಹರಿವಾಣ ನೈವೇದ್ಯ ಪ್ರಸಾದಕ್ಕಾಗಿ ಎನ್ನುವರು ಶೇಷಾಚಲವಾಸಿಯಾದ ನೀನು ಹೆಸರಾಂತ ಶೆಟ್ಟಿ ನೀನು ಕಾಸು ಕಾಸಿಗೆ ಬಡ್ಡಿಗಳಿಸುವ ಆದಿಕೇಶವ ನಾರಾಯಣ ತಿಮ್ಮ ಶೆಟ್ಟಿ ಎನ್ನುವರು ಅಪ್ಪ ಅತಿರಸ, ಲಡ್ಡು, ವಡೆ ಮುಂತಾದ ಭಕ್ಷ್ಯಗಳನ್ನು ಹಾಗೂ ಅಪರೂಪದ ಕಜ್ಜಾಯಗಳನ್ನು ಸರ್ವತ್ರ ಮಾರಿ ಧನ ಸಂಪಾದಿಸುವ ಆದಿಕೇಶವ ನಾರಾಯಣ ತಿಮ್ಮ ಶೆಟ್ಟಿ ಎಂದು ತನ್ನ ಆರಾಧ್ಯ ದೈವ ಶ್ರೀವೆಂಕಟೇಶನನ್ನು ಹಲವಾರು ನಾಮಗಳಲ್ಲಿ ಭಾವಪರವಶರಾಗಿ ಭಜಿಸಿ ಕೊಂಡಾಡಿ, ಧನ್ಯರಾಗುತ್ತಾರೆ ದುರುಳ ಕೌರವರನ್ನು ಸಿಕ್ಷಿಸಿ ಭಾವ ಮೈದುನರಾದ ಪಂಚಪಾಂಡವರನ್ನು ರಕ್ಷಿಸಿ, ಭೂವಲಯದಲ್ಲಿ, ಕೀರ್ತಿಯಿಂದ ಮೆರೆವ ದೇವನೆಲೆಯಾದಿ ಕೇಶವ ವೆಂಕಟೇಶ ಎಂದು ಕೊಂಡಾಡುತ್ತಾ ಮಹಾಭಾರತದ ಸಾರಾಂಶವನ್ನು ಒಂದೇ ಶ್ಲೋಕದಲ್ಲಿ ಹೇಳುತ್ತಾರೆ. ನೀನು ಹಿರಣ್ಯಕನನ್ನು ನರಸಿಂಹನಾಗಿ ಬಂದು ಹರಣ ಮಾಡಿರುವಿ ನೀನು ಕರಿರಾಜ ರಕ್ಷಕನಾದ ಕಾರುಣ್ಯಮೂರ್ತಿಯಾಗಿರುವಿ ನೀನು ಅಪ್ರಮೇಯನು ಆದಿಕೇಶವ ಸಿರಿಧರ ಹರಿ ಶೇಷಗಿರಿ ವರತಿಮ್ಮರಾಯನು ನೀನು ಎಂಬಲ್ಲಿ ಸಂಕ್ಷಿಪ್ತವಾಗಿ, ಹಿರಣ್ಯಕಶಿಪು ಸಂಹಾರ ಹಾಗೂ ಗಜೇಂದ್ರ ಮೋಕ್ಷದ ವಿಚಾರವನ್ನು ಶ್ರೀ ವೆಂಕಟೇಶನ ಹಿರಿಮೆ ಗರಿಮೆಗಳನ್ನೂ ಹತ್ತಾರು ಶಬ್ದಗಳಲ್ಲಿ ಬಾಯಿ ತುಂಬಾ ಬಣ್ಣಿಸುತ್ತಾರೆ

7. ತಿ ತಿ ದೇವಸ್ಥಾನಗಳ ಆಸ್ಥಾನ ಸಂಗೀತ ವಿದ್ವಾನ್ ದಿ|| ಘಂಟಸಾಲ ವೆಂಕಟೇಶರಾಯರು ಹಾಡಿದ ತಿರುಮಲೇಶನ ಗೀತೆಗಳು "ನಮೋ ವೆಂಕಟೇಶ, ನಮೋ ತಿರುಮಲೇಶ, ಮಹಾನಂದ ಮಾಯೇ ಓ ಮಹಾ ದೇವ ದೇವ", ಅವರ ಇನ್ನೊಂದು ಗೀತೆ "ಏಡು ಕೊಂಡಲಸಾಮಿ, ಎಕ್ಕಡುನ್ನಾವಯ್ಯ, ಎನ್ನೀಮೆಟ್ಲೆಕ್ಕಿನಾ ಕಾನಾರಾವೇಮಯ್ಯಾ.." ಅಂದರೆ ಎಲಾ ಸಪ್ತಗಿರಿಯೊಡೆಯ ಎಲ್ಲಿರುವ ಸ್ವಾಮಿ, ಎಷ್ಟು ಮೆಟ್ಟಲೇರಿದರೂ, ನಿನ್ನ ಕಾಣಲಿಲ್ಲ ಅರ್ಥಾತ್ ದೇಗನೆ ದರ್ಶನ ನೀಡು ಎಂಬ ಭಾವಾರ್ಥ. (ಮತ್ತೊಂದು ಕೀರ್ತನೆ ನಡಿಕೀಯಿ ಏ ಜಾಮುಲೋ ಸ್ವಾಮಿ ನಿನು ಚೇರ ದ್ಧಿಗಿವಚ್ಚುನೇ ಎಂಬಲ್ಲಿ ಅಲಮೇಲು ಮಂಗೆಯಲ್ಲಿ - ತಾಯಿಯಲ್ಲಿ ಬಿನ್ನಹ ಮಾಡುವ ರೀತಿ ಮನೋಜ್ಞವಾಗಿದೆ.)

ಕೊನೆಯದಾಗಿ "ವೆಂಕಟಾದ್ರಿ ಸಮಂಸ್ಥಾನಂ, ಬ್ರಹ್ಮಾಂಡೇನಾಸ್ತಿ ಕಿಂಚನ, ವೆಂಕಟೇಶ ಸಮೋ ದೇವೋ ನಭೂತೋ ನ ಭವಿಷ್ಯತಿ" ಅಂದರೆ ವೆಂಕಟಾದ್ರಿಗೆ ಸಮನಾದ ಪವಿತ್ರ ತಾಣ, ಬ್ರಹ್ಮಾಂಡದಲ್ಲೆಲ್ಲೂ ಇಲ್ಲ ವೆಂಕಟೇಶನಿಗೆ ಸಮನಾದ ದೇವರು ಹಿಂದೆ ಇಲ್ಲ ಭವಿಷ್ಯದಲ್ಲೂ ಇಲ್ಲ



# ಅನ್ನಮಯ್ಯ-ವೆಂಕಟೇಶ

- ಡಾ|| ಕೆ. ಸರ್ವೋತ್ತಮರಾವ್

ಅನ್ನಮಾಚಾರ್ಯರು ಕ್ರಿಶ. 1408 ರಲ್ಲಿ ಹುಟ್ಟಿ ಕ್ರಿಶ 1503 ರ ತನಕ ಬಾಳಿದವರು ಆಂಧ್ರಪ್ರದೇಶದ ಕಡಪ ಜಿಲ್ಲೆಯ ರಾಜಂಪೇಟೆ ತಾಲ್ಲೂಕಿನಲ್ಲಿ ತಾಳ್ಳಪಾಕ ಗ್ರಾಮದಲ್ಲಿ ಹುಟ್ಟಿದವರು ತಾಯಿ ಲಕ್ಕಮಾಂಬ, ತಂದೆ ನಾರಾಯಣಸೂರಿ ಇವರು ವಿಷ್ಣುವಿನ ನಂದಕಾಂಶದಿಂದ ಹುಟ್ಟಿದವರೆಂದು ಹೇಳುತ್ತಾರೆ ದಿನಕ್ಕೊಂದು ಕೀರ್ತನೆಯಂತೆ 32000 ಕೀರ್ತನೆಗಳನ್ನು ಹಾಡಿದರು ಇವೆಲ್ಲವೂ ತಾಮ್ರಪತ್ರದಲ್ಲಿ ಕಾಣುತ್ತವೆ. ತೆಲುಗಿನ ಪದಸಾಹಿತ್ಯಕ್ಕೆ ಅನ್ನಮಯ್ಯನ ಕೊಡುಗೆ ಅಪೂರ್ವವಾದುದು ಮತ್ತು ಅದ್ವಿತೀಯವಾದುದು

ಅನ್ನಮಾಚಾರ್ಯರ ಆರಾಧ್ಯ ದೈವ ಶ್ರೀ ವೆಂಕಟೇಶ್ವರಸ್ವಾಮಿ. ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ದಿವ್ಯಮಂಗಳ ಮೂರ್ತಿಯನ್ನು ನೋಡಿ 'ಇಪ್ಪುಡಿಟು ಕಲಗಂಟಿ' ಎಂಬ ಕೀರ್ತನೆಯನ್ನು ಹಾಡಿದರು ಅವರಿಗೆ ಸ್ವಾಮಿ ಸಂಪೂರ್ಣ ಅನುಗ್ರಹ ಲಭ್ಯವಾಯಿತು. ಸಾಳುವ ನರಸಿಂಹರಾಯನು ತನ್ನ ಬಗೆಗೆ ಕೀರ್ತನೆಯನ್ನು ಬರೆಯದೇಕೆಂದು ಅಹಂಕಾರದಿಂದ ಕೇಳುವಾಗ ಅನ್ನಮಾಚಾರ್ಯರು 'ನರಹರಿ ಕೀರ್ತನ ನಾ ನಿನ ಜಿಹ್ವ ಪರುಲ ನುತಿಂಪಗ ನೋಪದು ಜಿಹ್ವ' ಎಂದು ತಿರಸ್ಕರಿಸಿದರಂತೆ. ಅರಸನು ಕೋಪದಿಂದ ಕಾರಾಗೃಹದಲ್ಲಿ ಬಂಧಿಸಿದನು. ತನ್ನ ಭಕ್ತಿಯ ಶಕ್ತಿಯಿಂದ ಅಲ್ಲಿಂದ ಬಿಡುಗಡೆ ಹೊಂದಿದರು. ಆಚಾರ್ಯರು ತಾನು ಅರ್ಚಿಸುವ ದೇವತಾವಿಗ್ರಹಗಳು ಚೋರಿಯಾದ ವೇಳೆ ವಿಕಲಮನಸ್ಕರಾದರು ಭಕ್ತಿಯಿಂದ ಹಾಡಿದಾಗ ಆ ವಿಗ್ರಹಗಳು ಪುನಃ ಲಭ್ಯವಾದವು. ಅನ್ನಮಯ್ಯನ ಜೀವನದಲ್ಲಿ ವೆಂಕಟೇಶ್ವರಸ್ವಾಮಿ ಅನುಗ್ರಹ ಅತೀತವೆಂದು ಹೇಳಬಹುದು.

ಅನ್ನಮಾಚಾರ್ಯರು ವೆಂಕಟೇಶ್ವರನ ಪರಬ್ರಹ್ಮ ತತ್ವವಾಗಿ ದರ್ಶಿಸಿದರು 'ಬ್ರಹ್ಮಮೊಕ್ಕಟೇ ಪರಬ್ರಹ್ಮ ಮೊಕ್ಕಟೇ' ಕೃತಿ ಇದಕ್ಕೊಂದು ಸಾಕ್ಷ್ಯ ಹೀನಾಧಿಕಗಳು ಸೃಷ್ಟಿಯಲ್ಲಿ ಇಲ್ಲ 84 ಲಕ್ಷದ ಜಂತುಗಳು ಎಲ್ಲವೂ ಸಮಾನವೇ ಆನೆ ಮೇಲೆ ನಾಯಿಮೇಲೆ ಬಿಳುವ ಬಿಸಿಲು ಒಂದೇ ಭೇದವಿಲ್ಲ ಎಲ್ಲರನ್ನೂ ಕಾಯುವ ನಾಮ ವೆಂಕಟೇಶ್ವರನಾಮವು ಒಂದೇ.

ದೇವರೆಂದರೆ ತಿಮ್ಮಪ್ಪ ಗುರುವೆಂದರೆ ಮಂಚಾಲಿಯ ರಾಘಪ್ಪ - ಇದು ಕರ್ನಾಟಕ ಪ್ರಾಂತದಲ್ಲಿ ಪ್ರಚುರವಾದ ಒಂದು ಹೇಳಿಕೆ ವೆಂಕಟೇಶ್ವರನನ್ನು ಕೆಲವರು ವಿಷ್ಣುವೆಂದೂ, ಕೆಲವರು ಶಿವನೆಂದೂ, ಕೆಲವರು ಕುಮಾರಸ್ವಾಮಿ ಎಂದೂ, ಕೆಲವರು ಶಕ್ತಿಸ್ವರೂಪನೆಂದೂ ಮತ್ತು ಕೆಲವರು ಭೈರವನೆಂದೂ ಜಿನಾಕಾರಮೂರ್ತಿಯೆಂದೂ ವಾದ ಮಾಡುತ್ತಾ, ಆಧಾರಗಳನ್ನು ತೋರುತ್ತಿದ್ದಾರೆ ಆದ್ದರಿಂದ ಅನ್ನಮಾಚಾರ್ಯರು ಸಮನ್ವಯಸಿದ್ಧಾಂತವನ್ನು ಮಾಡಿದ್ದಾರೆ 'ಎಂತ ಮಾತ್ರಮುನ ಎವ್ವರು ತಲಚಿನ ಅಂತ ಮಾತ್ರಮೇ ನೀವು' ಕೃತಿಯಲ್ಲಿ ಈ ವಿಭೇದಗಳನ್ನು ಸ್ಮರಿಸಿ 'ಭಾವನೆ ಒಂದೇ ಇದಕ್ಕೆ' ಸಮಾಧಾನವೆಂದು ಹಾಡಿದ್ದಾರೆ ಇದೇ ಶ್ರೀನಿವಾಸನ ತತ್ವ



ಬಹು ದೇವತಾರಾಧನೆ ಹಿಂದೂ ಧರ್ಮದ ವಿಲಕ್ಷಣ ತತ್ವವೆಂದು ಹೇಳಬಹುದು ಅನ್ನಮಾಚಾರ್ಯರು ತಿಮ್ಮಪ್ಪನ ಭಜಿಸಿದರೂ ವಿಠ್ಠಲನನ್ನು ಸ್ಮರಿಸಿದ್ದಾರೆ

ತಾನೇ ಶ್ರೀ ವೇಂಕಟಾದ್ರಿ ಪಾಂಡುರಂಗಮುನ
ಯೆಟ್ಟುಗೊಲ್ಲಿನಾ ವರಮುಲಿಚ್ಚೆ ವಿಠ್ಠಲುಡು

ನೋಡಲು ಬಾಲಮೂರ್ತಿಯಾದರೂ ಎಲ್ಲ ವಿದ್ಯೆಗಳನ್ನು ಕಲಿತವನು ವಿಠ್ಠಲನು - ಎಂದು ಹೊಗಳಿದ್ದಾರೆ ಇದೇ ಪ್ರಕಾರ ಚೆನ್ನಕೇಶವನ ನೋಡಿದರೂ, ನರಸಿಂಹನ ದರ್ಶಿಸಿದರೂ ಅವರ ದೃಷ್ಟಿಯಲ್ಲಿ ತಿಮ್ಮಪ್ಪನೇ ಕಾಣುತ್ತಾನೆ

ತಿರುಮಲೆಯಲ್ಲಿದ್ದವೆಂಕಟೇಶ್ವರನನ್ನುಕಾಂಚನ ಬ್ರಹ್ಮನಾಗಿ ಸ್ತುತಿಸಲು ಭಕ್ತರ ಪಂಥ ಸ್ವಾಮಿ ಅರ್ಚಾವತಾರಮೂರ್ತಿ ಅವನೇ ರಾಮನು ಅವನೇ ಕೃಷ್ಣನು ಅವನೇ ನಾರಸಿಂಹನು ಅವನೇ ದಶಾವತಾರಮೂರ್ತಿ ಸ್ವರೂಪ ಆಳ್ವಾರ್‌ಗಳು ಇದೇ ರೀತಿಯಲ್ಲಿ ಹಾಡಿದ್ದಾರೆ ದಿವ್ಯಪ್ರಬಂಧಗಳನ್ನು ಕಲಿತ ಅನ್ನಮಾಚಾರ್ಯರು ಅದೇ ಬಗೆಯಲ್ಲಿ ವೆಂಕಟರಾಮುಡು, ವೆಂಕಟಕೃಷ್ಣುಡು ವೆಂಕಟನರಸಿಂಹುಡು ಎಂದು ಎರಡು ಹೆಸರುಗಳನ್ನು ಜೋಡಿಸಿ ಹಾಡಿದ್ದಾರೆ ಈ ಸ್ತುತಿಯಲ್ಲಿ ಗರ್ಭಗುಡಿಯಲ್ಲಿದ್ದ ರಾಮಾದಿ ಮೂರ್ತಿಗಳ ಸ್ಮರಣವೂ ಆಗಬಹುದು. ಆದ್ದರಿಂದ ತಿರುಮಲೆಯಲ್ಲಿ ರಾಮನವಮಿ ಉತ್ಸವಗಳು, ಕೃಷ್ಣಜಯಂತಿ, ನಾರಸಿಂಹಜಯಂತಿಗಳು ನಡೆಸುತ್ತಾರೆ

ಅನ್ನಮಾಚಾರ್ಯರು ನವವಿಧ ಭಕ್ತಿಭೇದಗಳನ್ನು ತಮ್ಮ ಕೀರ್ತನೆಗಳಲ್ಲಿ ಪ್ರಕಟಿಸಿದ್ದಾರೆ 'ವಿನರೋ ಭಾಗ್ಯಮು ವಿಷ್ಣುಕಥ' ಕೃತಿಯಲ್ಲಿ ಶ್ರವಣ ಭಕ್ತಿ, 'ಶ್ರೀವಿಷ್ಣು ನಾಮ ಮೊಕಟೇ ಚೇತಿಕಿಚ್ಚೆ ವೈಕುಂಠಮು' ಎಂಬ ವಾಕ್ಯಗಳಲ್ಲಿ ನಾಮಸ್ಮರಣೆ 'ಈ ಪಾದಮೇ ಕದಾ ಯಿಲಯಲ್ಲ ಕೊಲಿಚಿನದಿ' ಎಂಬ ಪಲ್ಲವಿಯಲ್ಲಿ ಪಾದಸೇವನೆ ವ್ಯಕ್ತವಾಗುತ್ತದೆ. ಅನ್ನಮಯ್ಯನ 'ಬ್ರಹ್ಮಕಡಿಗಿನ ಪಾದಮು' ಹಾಡು ಬಹಳ ಪ್ರಚಾರವಾದ ಕೀರ್ತನೆ ಎಂದು ಹೇಳಬಹುದು 'ನಾನಾ ಭಕ್ತುಲಿವಿ ನರುಲ ಮಾರ್ಗಮುಲು' ಕೀರ್ತನೆಯಲ್ಲಿ ಉನ್ಮಾದಭಕ್ತಿ, ಪತಿವ್ರತಾಭಕ್ತಿ, ವಿಜ್ಞಾನಭಕ್ತಿ, ಆನಂದಭಕ್ತಿ, ರಾಕ್ಷಸಭಕ್ತಿ, ತುರೀಯಭಕ್ತಿ, ತಾಮಸಭಕ್ತಿ, ವೈರಾಗ್ಯಭಕ್ತಿ, ರಾಜಸಭಕ್ತಿ, ನಿರ್ಮಲಭಕ್ತಿ, ನಿಜಭಕ್ತಿ ಭೇದಗಳನ್ನು ಹೇಳಿದ್ದಾರೆ ಲಕ್ಷ್ಯವಾಗಿ ಹಲವಾರು ಕೀರ್ತನೆಗಳನ್ನು ಹಾಡಿದ್ದಾರೆ

ಅನ್ನಮಾಚಾರ್ಯರಿಗೆ ಇಷ್ಟವಾದ ಭಕ್ತಿ ಕೈಂಕರ್ಯಭಕ್ತಿ ತನ್ನ ಕುಟುಂಬವನ್ನು ಕೈಂಕರ್ಯಕ್ಕಾಗಿ ಅರ್ಪಿಸಿದ ಮಹನೀಯರು ಅರಸರು ದಾನರೂಪದಲ್ಲಿ ಕೊಟ್ಟ ಗ್ರಾಮಗಳನ್ನು ಶ್ರೀನಿವಾಸನಿಗೆ ಅರ್ಪಿಸಿದ ಭಕ್ತರು ತಾಳ್ಳಪಾಕ ಕುಟುಂಬೀಕರು. ದೇವಾಲಯದಲ್ಲಿ ನಡೆಯುವ ಪ್ರತಿಯೊಂದು ಉತ್ಸವದಲ್ಲಿಯೂ ಭಾಗಪಡೆದುಕೊಂಡು ಸೇವೆ ಮಾಡಿದವರು ಅದಕ್ಕೆ ಅನುಗುಣವಾಗಿ ಉತ್ಸವಕೀರ್ತನೆಗಳನ್ನು ಹಾಡಿದವರು ಅನ್ನಮಾಚಾರ್ಯರು ಪೆರಿಯಾಳ್ವಾರ್ ಹಾಡಿದ ಬಗೆಯಲ್ಲಿ ವಾತ್ಸಲ್ಯ ಭಕ್ತಿಯನ್ನು ಆಚಾರ್ಯರು ಪ್ರಕಟಿಸಿದ್ದಾರೆ ಕುಲಶೇಖರಾಳ್ವಾರ್ ಹೇಳಿದ ಪ್ರಕಾರ ತಾನು ದಾಸನಿಗೆ ದಾಸನಿಗೆ ದಾಸನಿಗೆ ದಾಸಾನುದಾಸನಾಗಿ ಬಾಳುವೆನೆಂದು ಸ್ಪಷ್ಟವಾಗಿ ಹೇಳಿದ್ದಾರೆ







ಅನ್ನಮಾಚಾರ್ಯನಿಗೂ ತಿಮ್ಮಪ್ಪನೂ ಇದ್ದ ಅನುಬಂಧ ಮಾಧುರ್ಯ ಭಕ್ತಿ ರೂಪವಾದದ್ದು ಮಧುರ ಭಕ್ತಿಮಾರ್ಗದಲ್ಲಿ ಪರಮಾತ್ಮನೊಬ್ಬನೇ ಪುರುಷೋತ್ತಮನು ಜೀವರಾಶಿಗಳು ಸ್ತ್ರೀರೂಪವೇ ಗೋಪಿಯರು ಮಧುರ ಭಕ್ತಿ ಪೂರ್ವಕವಾಗಿ ಸೇವಿಸಿದರು ನಮ್ಮಾಳ್ವಾರ್ ಪಾಶುರಗಳಲ್ಲಿ ಮಾಧುರ್ಯ ಭಕ್ತಿ ಪರಾಕಾಷ್ಠರೂಪದಲ್ಲಿ ಸ್ಪಷ್ಟವಾಗುತ್ತದೆ. ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಶೃಂಗಾರಕೀರ್ತನೆಗಳೇ ಹೆಚ್ಚು

ಸಂಸಾರಮೇಮೇಲು ಸಕಲ ಜನುಲಕುನು
ಕಂಸಾಂತಕುನಿ ಭಕ್ತಿ ಕಲಿಗಿತೇ ಮೇಲು

ಈ ಅಭಿಪ್ರಾಯವನ್ನೇ ಪುರಂದರದಾಸರು-

ಸಂಸಾರವೆಂಬಂಧ ಭಾಗ್ಯವಿರಲಿ

ಎಂದು ಹೇಳಿದ್ದಾರೆ

ಅನ್ನಮಾಚಾರ್ಯರದು ಮುಖ್ಯವಾಗಿ ಆತ್ಮಾನುಭವ ಕಾವ್ಯ. ಅವರ ಕೀರ್ತನೆಗಳು ವೇಂಕಟೇಶ್ವರನನ್ನು ಉದ್ದೇಶಿಸಿದವೇ ಆದರೂ ಅವರು ಅಭಿವ್ಯಕ್ತಸಿದ್ದು ತಮ್ಮ ಅಂತರಂಗ ಬಹಿರಂಗ ಅನುಭವಗಳನ್ನೆ ದೋಷರಹಿತವಾದ, ಪ್ರಾಮಾಣಿಕವಾದ ಮತ್ತು ತೀವ್ರವಾದ ಭಗವದ್ಭಕ್ತಿ ಅವರ ರಚನೆಗಳಲ್ಲಿ ಕಂಡುಬರುತ್ತದೆ. ಅವರ ಕೀರ್ತನೆಗಳಲ್ಲಿರುವಷ್ಟು ಭಾವವೈವಿಧ್ಯ ಭಾವನಾಶಕ್ತಿ, ಆಳವಾದ ಅನುಭವಗಳ ಅಭಿವ್ಯಕ್ತಿ ತೆಲುಗಿನ ಬೇರೆ ಯಾವ ಕೀರ್ತನೆಕಾರರಲ್ಲೂ ಕಂಡುಬರುವುದಿಲ್ಲ

ಅನ್ನಮಾಚಾರ್ಯರ ಕೀರ್ತನೆಗಳ ಬಗ್ಗೆ ಡಾ|| ಅಕ್ಕಮಹಾದೇವಿಯವರು ಪ್ರಕಟಿಸಿದ ಅಭಿಪ್ರಾಯಗಳು ಸತ್ಯವೇ



# ಶ್ರೀನಿವಾಸ-ಪುರಂದರದಾಸರು

- ಆದ್ಯರಾಮಾಚಾರ್ಯ.

ಕರ್ನಾಟಕ ಸಂಗೀತಕ್ಕೆ ಪುರಂದರದಾಸರ ಕೊಡುಗೆಯು ಭಕ್ತಿಸಾಹಿತ್ಯಾಭ್ಯಾಸಿಗಳಿಗೆಲ್ಲ ಅಭ್ಯಾಸಕ್ಕೆ ಬಹು ಯೋಗ್ಯ ವಿಷಯವೆನಿಸಿದೆ. ನಾಲ್ಕು ಶತಮಾನಗಳ ಹಿಂದಿನ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಭಾರತೀಯ ಸಂಗೀತದಲ್ಲಿ ಯಾವ ರೀತಿಯಲ್ಲಿ ಮಾರ್ಪಾಟುಗಳಾದವೆಂಬ ವಿಚಾರವನ್ನು ಕುರಿತು ಅರಿತುಕೊಳ್ಳಬೇಕಾದಲ್ಲಿ ಮೊದಲು ಪುರಂದರದಾಸರಿಂದ ರಚಿತವಾದ ಕೃತಿಗಳನ್ನು ಆಮೂಲಾಗ್ರವಾಗಿ ಅಭ್ಯಾಸ ಮಾಡುವುದು ವಿಹಿತವೆನಿಸುತ್ತದೆ. ಭಾರತೀಯ ತತ್ವಶಾಸ್ತ್ರಗಳ ನಿಗೂಢ ಅರ್ಥಗಳನ್ನೊಳಗೊಂಡ ವೇದೋಪನಿಷತ್ತುಗಳ ಸಾರವನ್ನೆಲ್ಲ ದಾಸರಾಯರು ಪ್ರಾಕೃತ ಭಾಷೆಯಲ್ಲಿ ಒದಗಿಸಿ, ಭಕ್ತಿಸಾಹಿತ್ಯಕ್ಕೆ ಅಪಾರ ಸೇವೆ ಗೈದ ಪುನೀತಾತ್ಮರೆನಿಸಿಕೊಂಡಿರುವರು ಆದುದರಿಂದಲೇ ಸ್ವತಃ ಅವರು ತಮ್ಮ ಗುರುಗಳಾದ ವ್ಯಾಸರಾಜ ಯತಿಗಳಿಂದಲೇ "ದಾಸರೆಂದರೆ ಪುರಂದರದಾಸರಯ್ಯ" ಎಂದು ಮುಕ್ತ ಕಂಠದಿಂದ ಹೊಗಳಿಸಿಕೊಂಡರು. ಗುರುಗಳು ದಾಸರಾಯರ ಕೃತಿಗಳೆಲ್ಲ ಪುರಂದರೋಪನಿಷತ್ತುಗಳೆಂದು ಕೊಂಡಾಡಿದರು ಈ ತರಹದ ಗುರುಶಿಷ್ಯ ಅನ್ಯೋನ್ಯತೆಯ ಭಾವವನ್ನು ಕಾಣುವುದು ಬಹು ಅಪರೂಪವೆಂದೆನಿಸುವುದು.

ಭಾರತೀಯ ಸಂಗೀತ ಲೋಕದಲ್ಲಿ ದಾಸರನ್ನು ಕರ್ನಾಟಕ ಸಂಗೀತ ಪಿತಾಮಹರೆಂದು ಅತ್ಯಂತ ಅಭಿಮಾನದಿಂದ, ಗೌರವ ಭಾವದಿಂದ ದಕ್ಷಿಣ ಭಾರತದ ಸಂಗೀತ ಕಲಾಪ್ರಿಯರು ಅವರನ್ನು ಪೂಜಿಸುವುದುಂಟು ಇದು ಕನ್ನಡಿಗರಿಗೆಲ್ಲ ಹೆಮ್ಮೆಯ ವಿಷಯವೆನಿಸುವುದು ಪುರಂದರದಾಸರ ಆರಾಧ್ಯ ದೈವ ಪಂಢರಾಪುರದ ವಿಠ್ಠಲನು ಆದರೆ ಅವರ ಉಪಾಸ್ಯ ದೇವತೆಯು ತಿರುಮಲಾಧೀಶನಾದ ಶ್ರೀನಿವಾಸ. ಮೇಲುಗಿರಿಯೊಡೆಯನಾದ ಆ ದೇವನ ಮುಂದೆ ಬಂದು ನಿಂತುಕೊಂಡಾಗ ಅಂತರಂಗದಲ್ಲಿ ಅವರು ಆ ದೇವನ ಅನೇಕ ಲೀಲಾ ವಿನೋದಾವಳಿಗಳ ದೃಶ್ಯಗಳನ್ನು ಕಂಡು ಆನಂದಾನುಭವದಿಂದ ಶ್ರೀನಿವಾಸನ ಮಹಿಮಾತಿಶಯಗಳನ್ನು ಕುರಿತು ಅನೇಕ ಕೀರ್ತನೆಗಳನ್ನು ರಚಿಸಿ ಹಾಡಿದ್ದಾರೆ. "ಆ ಪಾದ ಆನಂದ ಆಜಾನು ಜಂಘೆ ಆನಂದ ಪುರಂದರವಿಠ್ಠಲ" ಎಂಬ ಆಪಾದ ಮಸ್ತಕದವರೆಗೆ ಆ ದೇವನನ್ನು ಕಣ್ತುಂಬ ನೋಡಿ ಆನಂದ ತುಂದಿಲರಾಗಿ "ಏಳಯ್ಯ ಬೆಳಗಾಯಿತು, ಏಳು ನಾರಾಯಣ, ಏಳು ಲಕ್ಷ್ಮೀ ರಮಣ, ಏಳು ಗಿರಿ ವೆಂಕ



ಟೇಶ" ಎಂದು ತಮ್ಮ ಉಪಾಸ್ಯ ದೇವನನ್ನು ಎಬ್ಬಿಸಲು ಪ್ರಯತ್ನಿಸಿದ್ದಾರೆ ಹೇ ಗರುಡಗಮನ, ಲಕ್ಷ್ಮೀಪತೇ ಮೂರು ಲೋಕಗಳಿಗೂ ಮಂಗಳ ವನ್ನುಂಟು ಮಾಡಲು ಎದ್ದೇಳು ಎಂದು, ತಾಯಿ ಮಗುವನ್ನು ಹೇಗೆ ನಯ ವಿನಯಗಳಿಂದ ಎಬ್ಬಿಸುತ್ತಾಳೆಯೋ ಹಾಗೆ ತಮ್ಮ ದೇವನನ್ನೆಬ್ಬಿಸುವ ಪರಿಯು ಬಹು ಮೋಹಕವಾದುದು. ದಾಸರಾಯರ ಅಂತರಂಗದಿಂದ ಹೊರಹೊಮ್ಮಿ ಬಂದ ಅಂತಃಕರಣದ ಮಾತುಗಳೇ ಕಾವ್ಯರೂಪದಲ್ಲಿ ಹೊರಹೊಮ್ಮಿ ಬರುವಂತಾಗಿದೆ.

ಪ್ರತಿದಿನವೂ ರಾತ್ರಿಯಾದೊಡನೆ ಗರ್ಭಗುಡಿಯಲ್ಲಿರುವ ಉತ್ಸವ ಮೂರ್ತಿಯನ್ನು ತೊಟ್ಟಿಲಲ್ಲಿಟ್ಟು ಜೋಗುಳದ ಪದಗಳನ್ನು ಹಾಡಿ ಮಲಗಿಸುವುದು ಪ್ರಾಚೀನ ಕಾಲದಿಂದ ನಡೆದುಬಂದ ಸಂಪ್ರದಾಯ ಹಾಗೆ ಮಲಗಿಸಿದ ದೇವನನ್ನು ಪುನಃ ಎಬ್ಬಿಸಲು ದಾಸರಾಯರು "ಏಳಯ್ಯ ಬೆಳಗಾಯಿತು" ಎಂದು ವಾತ್ಸಲ್ಯದಿಂದ ಆತನನ್ನು ಪ್ರಾರ್ಥಿಸಿಕೊಳ್ಳುವರು. ಭಕ್ತಿಯ ಇನ್ನೊಂದು ಮುಖವೇ ಶೃಂಗಾರವೆನಿಸುವುದು. ಭಕ್ತನ ಪಾಲಿಗೆ ಎಲ್ಲ ರಸಗಳೂ ಆ ಭಗವಂತನಲ್ಲಿ ಸಮನ್ವಯಗೊಳ್ಳುವುವು. ವಸುದೇವ ಹಾಗೂ ದೇವಕಿಯರಂತೆ ಇಲ್ಲವೇ ವೃಂದಾವನದ ಗೋಪಿಯರಂತೆ ಆತನನ್ನು ವಾತ್ಸಲ್ಯ ಭಾವದಿಂದ ಕಂಡು, "ಅಯ್ಯ ನೀನೇ ತಂದೆ, ನೀನೇ ತಾಯಿ, ಬಂಧು, ಬಳಗ ಎಲ್ಲವೂ ನೀನೇ, ತ್ವಮೇವ ಮಾತಾಚ ಪಿತಾ ತ್ವಮೇವ" ಎಂಬ ಭಾವದಿಂದ ಆ ದೇವನನ್ನು ಕೊಂಡಾಡಿ ಎಬ್ಬಿಸಲು ಪ್ರಯತ್ನಿಸುತ್ತಾರೆ.

ಶ್ರೀನಿವಾಸನನ್ನು ಯಾರು ಮನಃಪೂರ್ವಕವಾಗಿ ನಂಬಿದ್ದಾರೆಯೋ ಅಂಥ ಭಕ್ತರ ಹೃದಯವೇ ಆತನಿಗೆ ತೊಟ್ಟಿಲು. ಅನಂತ ರೂಪಿಯಾದ ಆತನು ಎಲ್ಲರ ಹೃದಯದಲ್ಲಿಯೂ ವಾಸವಾಗಿದ್ದಾನೆ. ಹೃದಯಾಂತರ್ಯಾಮಿಯಾದ ಆ ದಿವ್ಯ ರೂಪವನ್ನೇ ದಾಸರಾಯರು "ಏಳಯ್ಯ ಬೆಳಗಾಯಿತು" ಎಂದು ಬಹು ಆರ್ತತೆಯಿಂದ, ವಿನಮ್ರತೆಯಿಂದ ಕೇಳಿಕೊಳ್ಳುತ್ತಾರೆ. ಭಕ್ತರು ಭಗವಂತನನ್ನು ನಾನಾ ರೀತಿಯಲ್ಲಿ ಪ್ರಾರ್ಥಿಸಿಕೊಳ್ಳುವುದುಂಟು. "ನಿನ್ನ ಕೃಪಾದೃಷ್ಟಿಯು ಸದಾ ನನ್ನ ಮೇಲಿರಲಿ, ಹೇ ದಯಾಮಯ ಪ್ರಭುವೇ, ನನ್ನನ್ನು ಉದ್ಧಾರ ಮಾಡಲಿಕ್ಕಾಗಿ ಎದ್ದೇಳಯ್ಯ

ಏಳು ನಾರಾಯಣ
ಏಳು ಲಕ್ಷ್ಮೀ ರಮಣ
'ಏಳುಗಿರಿ'ಯೊಡೆಯ ವೆಂಕಟೇಶ

ದಾಸರಾಯರ ಈ ಪದ್ಯವು ಕೇವಲ ಹೊರಗಣ್ಣಿನ ಪ್ರಾರ್ಥನೆಯಾಗಿರದೆ, ಅದು ಅವರ ಅಂತರಂಗ, ಆತ್ಮಾರ್ಪಣೆಯ ದೇಡಿಕೆಯಾಗಿದೆ. ಗಗನ ಚುಂಬಿತವಾದ ವೃಕ್ಷಗಳ ಆಶ್ರಯದಲ್ಲಿದ್ದ ಕೋಗಿಲೆಗಳು, ಗಿಳಿವಿಂಡುಗಳು ತಮ್ಮ ಕಲರವ ನಾದದ ಹಿನ್ನಲೆಯಲ್ಲಿ ದಾಸರಾಯರು ತಾವುಧರಿಸಿದ ತುಂಬೂರಿಯ ಮೇಲೆ ಕೈಯಾಡಿಸುತ್ತಾರೆ. ಆಗ ಇಡೀ ಪರ್ವತವೆಲ್ಲ ಬಂಗಾರಮಯವಾಗಿ ತೋರುವಂತೆ ಸೂರ್ಯದೇವನು ಹೊಂಬಣ್ಣದ ತನ್ನ ಕಿರಣಗಳನ್ನು ಎಲ್ಲೆಡೆಗೆ ಚೆಲ್ಲುತ್ತಾನೆ. ಇಂಥ ಪ್ರಶಾಂತ ಸಮಯದಲ್ಲಿ ಆ ದೇವನೊಬ್ಬನನ್ನೇ ಕರೆಯದೆ, ಹೇ ಲಕ್ಷ್ಮೀರಮಣ, ಗಿರಿಯೊಡೆಯ ಎಂದು ಆತನಿಗೆ ಅತ್ಯಂತ ಪ್ರಿಯಳಾದ ಶ್ರೀದೇವಿಯ ಹೆಸರನ್ನೂ ಸಹ ದಾಸರು ಈ ಪದ್ಯದಲ್ಲಿ ಅಳವಡಿಸಿಕೊಂಡಿದ್ದಾರೆ. ಯಾಕೆಂದರೆ ಲಕ್ಷ್ಮೀ ನಾರಾಯಣರಲ್ಲಿ ಭೇದವೆಂಬುದೇ ಇಲ್ಲ. ಅವರಿಬ್ಬರದು ಅವಿನಾಭಾವ ಸಂಬಂಧವೆಂಬುದನ್ನು ಅವರು ಚೆನ್ನಾಗಿ ಬಲ್ಲವರಾಗಿದ್ದಾರೆ. ಓಂಕಾರದ ಮೂಲ ಮಂತ್ರವೇ ನಾರಾಯಣ ಇದು ಆತನ ಆನಂದಮಯ ರೂಪವೆನಿಸುವುದು ಆದುದರಿಂದಲೇ ಹೇ ಪ್ರಭು, ನಿನ್ನ ಭಕ್ತರಿಗೆಲ್ಲ ಆ ನಿನ್ನ ಆನಂದ ರೂಪವನ್ನು ತೋರಲು ಎದ್ದೇಳು, ಎಂದು ಬಹು ಪರಿಯಿಂದ ಕೇಳಿಕೊಂಡಿದ್ದಾರೆ

ದಾಸರು ಇಲ್ಲಿ ಬಳಸಿದ ಲಕ್ಷ್ಮಿಯ ರೂಪವೇ ಪದ್ಮಾವತಿಯದು. ಅವಳನ್ನು ವರಿಸುವುದಕ್ಕಾಗಿಯೇ ಆತನು ಸ್ವಾಮಿ ಪುಷ್ಕರಿಣೀ ತೀರದಲ್ಲಿ ಬಂದು ವಾಸ ಮಾಡಿದನು ಹಿಂದೊಂದು ಯುಗದಲ್ಲಿ ತನ್ನ ತಾಯಿಗಿತ್ತ ವಚನವನ್ನುಳಿಸಿಕೊಳ್ಳಲು ತಿರುಮಲೆಯ ಬೆಟ್ಟದಿಂದ ಕೆಳಗಿಳಿದು ಬಂದು ಆಕಾಶರಾಜನ ಪಟ್ಟಣಕ್ಕೆ ಧಾವಿಸಿದವನು. ಏಳು ಬೆಟ್ಟಗಳ ಒಡೆಯನೆಂದೆನಿಸಿಕೊಂಡ. ಈತನು ಬಂದು ನಿಂತ ಈ ಪರ್ವತಕ್ಕೆ ವೆಂಗಡ, ವೆಂಗಳ, ವೆಂಕಟ ಎಂದೆಲ್ಲ ಹೆಸರಿನಿಂದ ಋಷಿಮುನಿಗಳು ಗುರುತಿಸತೊಡಗಿದರು. ಶ್ರೀಪತಿಯ ವಿವಾಹದ ವೈಭವವಂತೂ ಬ್ರಹ್ಮಾದಿಗಳಿಂದಲೂ ವರ್ಣಿಸಲಸಾಧ್ಯವೆನಿಸಬಹುದಾದ ಮಹೋತ್ಸವವೆನಿಸಿಕೊಂಡಿತು ಭಕ್ತರು ಶ್ರೀಪತಿಯ ವಾಸಸ್ಥಾನವನ್ನೇ ತಿರುಮಲೆ ಎಂದು ಹುಡುಕಿಕೊಂಡು ಬರತೊಡಗಿದರು ಆತನನ್ನು ತಿರುಮಲೆಯಪ್ಪನೆಂದೂ, ಏಳು ಪರ್ವತಗಳ ಒಡೆಯನೆಂದೂ ಸ್ಮರಣೆ ಮಾಡಿಕೊಂಡು, ಹರಕೆ ಹೊತ್ತು ಬೆಟ್ಟವನ್ನೇರತೊಡಗಿದರು " ಸ್ವಾಮಿ ನಿನ್ನ ಭಕ್ತರ ಹೃದಯವೇ ಈ ಶ್ರೀ ಪೀಠವೆನಿಸಿದೆ. ಪಂಚೇಂದ್ರಿಯಗಳಿಂದ ಶ್ರೀಮಂತವಾದ ಈ ಭೂವೈಕುಂಠದಲ್ಲಿ ಪವಡಿಸಿದ ಶ್ರೀಮನ್ನಾರಾಯಣನೇ ನೀನು ಸಾತ್ವಿಕ ಇಂದ್ರಿಯಗಳಿಗೆಲ್ಲ ಸಂಪತ್ತಿನ ರಮಣನಲ್ಲವೆ? ಹೇ ದಯಾನಿಧಿಯಾದ ಶ್ರೀ ವೆಂಕಟೇಶನೇ, ನಮ್ಮನ್ನು ಉದ್ಧರಿಸಲು ಎದ್ದೇಳಯ್ಯ" ಎಂದು ಪ್ರಾರ್ಥಿಸತೊಡಗಿದರು

ಅರಳು ಮಲ್ಲಿಗೆ, ಜಾಜಿ ಪರಿಮಳದ ಪುಷ್ಪಗಳು ಸುರರು ತಂದಿಹರಯ್ಯ ಸುಜನರೊಡೆಯ ಎಂದು ಆತನ ಗುಣಗಾನ ಮಾಡಿದರು. ಅದೇ ರೀತಿ ತಮ್ಮ ಇನ್ನೊಂದು ಪದ್ಯದಲ್ಲಿ ವೇಣುನಾದ ಬಾರೋ, ಬಾಣನ ಭಂಜಿಸಿದಂಥ ಭಾವಜನ್ನೆಯ್ಯನೇ ಬಾರೋ ಎಂಬುದಾಗಿಯೂ ಸ್ತೋತ್ರ ಮಾಡಿದರು ಈ ಪದ್ಯದಲ್ಲಿಯ ವೆಂಕಟರಮಣನೆಂದರೆ, ವೆಂಗಡದಲ್ಲಿ ನೆಲೆಸಿದ ಶ್ರೀಮನ್ನಾರಾಯಣನ ರೂಪವೇ ಆಗಿರುವುದು ಈತನೇ ಪಾಲ್ಗಡಲಶಾಯಿ ಈತನೇ ಪದ್ಮನಾಭನೆಂದೆನಿಸಿಕೊಂಡವನು ರಾಮನಾಗಿ ರಾವಣನ ಸಂಹಾರ ಮಾಡಿದವನೂ ಈತನೆ ಕೃಷ್ಣನಾಗಿ ಕಂಸನನ್ನು ಸಂಹರಿಸಿದವನೂ ಈತನೇ. ಗೋಕುಲದಲ್ಲಿ ಗೋಪಿಯರೊಂದಿಗೆ ರಾಸಕ್ರೀಡೆಯನ್ನಾಡಿದವನೂ ಈ ಮಹಾನುಭಾವನೇ ಇಂದು ಕಲಿಯುಗದಲ್ಲಿ ತನ್ನ ಭಕ್ತರನ್ನುದ್ಧರಿಸಲು ಧರೆಗಿಳಿದುಬಂದ ವೆಂಕಟೇಶನೂ ಈತನೇ ಅಲ್ಲವೆ ಇಲ್ಲಿ ದಾಸರಾಯರು ಭಾವಜನಯ್ಯ ಎಂಬ ಪದವನ್ನು ಬಳಸಿದ್ದಾರೆ "ಭಾವಜ" ಎಂದರೆ ಮನಸ್ಸು, ಭಾವಜ ಎಂದರೆ ಕಾಮ, ಈ ಕಾಮದೇವನೇ ರುಕ್ಮಿಣಿಯಲ್ಲಿ ಪ್ರದ್ಯುಮ್ನನಾಗಿ ಹುಟ್ಟಿದವನು ಈ ಭಾವಜನಾದ ಕಾಮನೇ ಸನಕಾದಿಗಳೊಂದಿಗೆ ಸನತ್ಕುಮಾರನಾಗಿ ಅವತರಿಸಿದವನು ಈ ಭಾವಜನೆಯ್ಯನೇ ರುದ್ರದೇವರ ಮಗನಾಗಿ ಸ್ಕಂಧನೆಂದು ಪೂಜೆಗೊಳ್ಳತೊಡಗಿದವನು ಒಂದು ಬೆಳಗಿನ ಜಾವದಲ್ಲಿ ಶ್ರೀನಿವಾಸನ ಸನ್ನಿಧಾನದಲ್ಲಿ ಧ್ಯಾನಮಗ್ನರಾಗಿ ನಿಂತ ಪುರಂದರದಾಸರಿಂದ ಈ ಪದ್ಯವು ರಚನೆಯಾಯಿತು. ಇದಕ್ಕಾಗಿ ಒಂದು ಹಿನ್ನೆಲೆಯಿರುವುದನ್ನು ನಾವು ಗಮನಿಸಬೇಕು

ಬಾಣಾಸುರನನ್ನು ನಮ್ಮ ಸ್ವಾಮಿಯು ಸಂಹರಿಸಿದನು ಆ ಘಟನೆಯನ್ನು ಭಕ್ತರು ಏಕೋಭಾವದಿಂದ ಸ್ಮರಿಸಿಕೊಂಡಲ್ಲಿ ಅಂಥವರಿಗೆ ಸೋಲೆಂಬುದೇ ಇಲ್ಲ ಎಂಬುದನ್ನು ಸಾರುವುದಕ್ಕಾಗಿಯೇ ಭಾವಜನಯ್ಯ ಎಂಬ ಪ್ರಯೋಗವನ್ನು ಮಾಡಿದರು ಇನ್ನೊಂದು ಪದ್ಯದಲ್ಲಿ ಏಳಯ್ಯ ಬೆಳಗಾಯಿತು, ಬಿಸಿಲು ಮೈದೋರುತಿದೆ ಎಂದು ಭಗವಂತನ ದಶಾವತಾರಗಳನ್ನೆಲ್ಲಾ ಒಂದೊಂದಾಗಿ ಹೊಗಳಿದರು "ಹೇ ಪ್ರಭು ನೀನು ಹಾಲ್ಗಡಲಿನಿಂದ ಎದ್ದೇಳು" - ಎಂದು ನುಡಿಯುವಾಗ ಬ್ರಾಹ್ಮೀ ಮುಹೂರ್ತದ ಸಮಯವಾದುದರಿಂದ ನಸುಕಿನೊಂದಿಗೆ ಬೆಳಕು ಬೆನ್ನೇರಿ ಬರುತ್ತಿರುವ ಸಂಧಿಕಾಲವು ಆದಾಗಿತ್ತು. ತಿರುಮಲೆಯ ವಾತಾವರಣವೆಲ್ಲ ಚೇತೋಹಾರಿಯಾದ ಸಮಯದಲ್ಲಿ ದಾಸರಾಯರು ಸ್ವಾಮಿಯ ಸನ್ನಿಧಿಯಲ್ಲಿ ತಾವು ಹಿಡಿದ ತಂಬೂರಿಯನ್ನು ಮಿಟುತ್ತಾ ತಲ್ಲೀನರಾಗಿ "ಏಳಯ್ಯ ಬೆಳಗಾಯಿತು" ಎಂದು ಪ್ರಾರ್ಥಿಸುತ್ತಾ ತಮ್ಮ ಉಪಾಸ್ಯ ದೇವನ ಕರ್ತವ್ಯಗಳನ್ನು ತಿಳಿಸಿ ಹೇಳಲು ಪ್ರಯತ್ನಿಸಿದರು ವೇದವನು ತರಲೇಳು, ಮಂದರವ ಹೊರಲೇಳು, ಭೇದಿಸುತ ಅಸುರರನು ದಾಡೆಯಿಂ ತರಲೇಳು, ಕಾದಿ ಹಿರಣ್ಯನ ಕರುಳ ಕೊರಳೊಳು ಧರಿಸೇಳು, ಆಲಸ್ಯ ಮಾಡದೇ ಎದ್ದೇಳು ಈ ಪದ್ಯದಲ್ಲಿಯ ವರ್ಣಾನಾಲಂಕಾರವು ಅದೆಷ್ಟು ಮೋಹಕವಾದುದು. ದಾಸರಾಯರಿಗೆ ಆನಂದ ರೂಪಿಯಾದ ಶ್ರೀನಿವಾಸನು ವಿವಿಧ ರೂಪದಲ್ಲಿ ಅವರ ಕಣ್ಮುಂದೆ ಹಾದು ಹೋಗಿರಬಹುದೆಂದೆನಿಸುವುದಿಲ್ಲವೇ.

ಮನಸ್ಸು ಮರ್ಕಟವಿದ್ದಂತೆ ಬಹು ಚಂಚಲ. ಆದುದರಿಂದ ದಾಸರು ಹೇಳುತ್ತಾರೆ, ಹೇ ದೇವಾ ನನ್ನ ಮನದಲ್ಲಿಯೇ ನಿನಗೆ ಮಂಟಪ ಹಾಕಿ ತನುವನ್ನೇ ನಿನಗೆ ಅರ್ಪಿಸುವೆನಯ್ಯ, ಘನಮಹಿಮ, ಈ ಮನೆ ಕೇವಲ ಬರೀ ಮನೆಯಲ್ಲ ಕರುಣಾನಿಧಿ, ಈ ಮನೆಯಲ್ಲಿ ಬಂದು ನೆಲೆಸಲು ಬಾರಯ್ಯ ಎಂದೆನ್ನುತ್ತಾರೆ ಭಗವದಾರಾಧನೆಯಲ್ಲಿ ಎರಡು ವಿಧಾನಗಳಿವೆ. ಒಂದನೆಯದು ಬಾಹ್ಯ ಪೂಜೆಯಾದರೆ ಎರಡನೆಯದು ನಾನಾ ಕ್ಷೇತ್ರಗಳಲ್ಲಿರುವ ವಿಗ್ರಹಗಳು ಹಾಗೂ ಸಾಲಿಗ್ರಾಮಗಳಲ್ಲಿ ತೋರುವ ನಾನಾ ಬಗೆಯ ಭಗವದ್ರೂಪಗಳು, ಈ ಪೂಜೆಯನ್ನು ಮಾನಸಪೂಜೆ ಎಂದೆನ್ನುವುದುಂಟು ದಾಸರಾಯರು ಈ ಎರಡೂ ವಿಧಾನದ ಪೂಜೆಯಲ್ಲಿ ತಲ್ಲೀನರಾಗಲು ಹಂಬಲಿಸುತ್ತಾರೆ ಅಂತ ಶ್ಚಕ್ಷುಗಳಿಂದ ವೆಂಕಟರಮಣನನ್ನು ಕಾಣಲು ಬಯಸುತ್ತಾರೆ ಕಲಿಯುಗದಲ್ಲಿ ಆತನ ಸಾಕ್ಷಾತ್ಕಾರ ದರ್ಶನವು ಬಹು ದುರ್ಲಭವಾದುದರಿಂದ ಅತ್ಯಂತ ಭಕ್ತಿಪೂರ್ವಕ ಬಾರಯ್ಯ ವೆಂಕಟರಮಣ ಎಂದು ಬಾರಿ ಬಾರಿ ಕೇಳಿಕೊಳ್ಳುತ್ತಾರೆ ಪಂಕಜಾಕ್ಷ ನನ್ನ ಚಿತ್ತ ಚಾಂಚಲ್ಯವನ್ನು ದೂರಮಾಡಿ, ಭ್ರಾಂತ ವಿಷಯಗಳಿಗೆ ಬಲಿಯಾಗದಂತೆ ನನಗೆ ದಾರಿ ತೋರಲು ಬಾರಯ್ಯ ನೀನು ಕೌತುಹಿತನಾದ ನಾರಾಯಣನಲ್ಲವೆ, ದಾಸರಾಯರ ಈ ಪ್ರಾರ್ಥನೆಯಲ್ಲಿ ಸಖ್ಯತ್ವವಿದೆ. ಮಿತ್ರತ್ವವಿದೆ. ದಾಸ್ಯತ್ವವಿದೆ. ನೀನು ಪ್ರತ್ಯಕ್ಷ ರೂಪದಲ್ಲಿ ದರ್ಶನವನ್ನೀಯಲಾರೆ ಆದರೆ ನಿನ್ನ ಅನುಗ್ರಹದ ಆಭಾಸವನ್ನಾದರೂ ನನಗೆ ದಯಪಾಲಿಸಯ್ಯ, ನಿನ್ನನ್ನು ಸಂಪೂರ್ಣವಾಗಿ ತಿಳಿಯಬೇಕಾದಲ್ಲಿ ವೇದಗಳಿಗೆ ಮಾತ್ರ ಸಾಧ್ಯ. ಈ ಮಾತನ್ನು ನೀನೇ ಹೇಳಿದ್ದಲ್ಲವೇ ಬಾಹ್ಯ ಚಕ್ಷುಗಳಿಗೆ ಗೋಚರಿಸದ ನೀನು ನನ್ನ ಅಂತರಂಗದ ಚಕ್ಷುಗಳಲ್ಲಿಯಾದರೂ ಮಿಂಚಿ ಮಾಯವಾಗಬಾರದೆ? ನೀನಲ್ಲದೆ ಬೇರಿನ್ನಾರು ನನ್ನನ್ನು ಉದ್ಧರಿಸಬಲ್ಲರು ನಾನೆಂದೂ ನಿನ್ನ ವಿನಃ ಅನ್ಯ ದೇವತೆಗಳಿಗೆ ಮೊರೆ ಹೋಗಲಾರೆನಯ್ಯ ಪ್ರಭು, ನನ್ನ ಅನನ್ಯ ಶರಣಾಗತಿಯನ್ನು ಮನ್ನಿಸಯ್ಯ ಮೇಲು ಗಿರೀಶ, ಪುರಂಧರ ವಿಠ್ಠಲ ಇಲ್ಲಿ ಮೇಲುಗಿರಿ ಎಂಬ ಪದವು ವೆಂಕಟಗಿರಿಯನ್ನು ಕುರಿತಾದುದು. ಈ ಗಿರಿಯು ಸಾಮಾನ್ಯವಾದುದಲ್ಲ. ಇದುವೇ ಭೂವೈಕುಂಠವೆಂದೆನಿಸಿಕೊಂಡಿದೆಯಲ್ಲವೆ?

ಪುರಂದರ ದಾಸರಾಯರ ಕೃತಿಗಳೆಲ್ಲ ಪಾಲ್ಗಡಲಿನಂತಿವೆ. ಆ ಕಡಲಿನಲ್ಲಿ ಶ್ರೀದೇವಿಯನ್ನು ಕಾಣಬಹುದು ಕಲ್ಪವೃಕ್ಷವನ್ನು ನೋಡಬಹುದು. ಅಮೃತ ಕಲಶವನ್ನು ಹಿಡಿದು ಬಂದ ಧನ್ವಂತರಿಯನ್ನೂ ಕಾಣಬಹುದು ನವವಿಧ ಭಕ್ತಿರತ್ನಗಳನ್ನೂ ಗುರುತಿಸಬಹುದು.

ಪರ್ಶಿಯಾ ದೇಶದ ದಾರ್ಶನಿಕ ಕವಿಯೊಬ್ಬನು ಈ ವಿಶ್ವದ ಮೊದಲು ಹಾಗೂ ಕಡೆಯ ಪುಟಗಳು ಕಳೆದು ಹೋದಂತಿದೆ. ಆದುದರಿಂದ ಆ ಪುಸ್ತಕದ ಕೊನೆ ಮೊದಲು ಏನಿರಬಹುದೆಂಬುದನ್ನು ಅರಿತುಕೊಳ್ಳಲು ಸಾಧ್ಯವಿಲ್ಲ ಮಾನವನು ತನಗೆ ಬುದ್ಧಿ ಬಂದಾಗಿನಿಂದಲೂ ಕಳೆದು ಹೋದ ಆ ಪುಸ್ತಕದ ಪುಟಗಳಲ್ಲಿ ಏನಿರಬಹುದೆಂಬುದನ್ನು ಹುಡುಕುತ್ತಲೇ ಇದ್ದಾನೆ ಎಂದಿದ್ದಾನೆ ಅದೇ ರೀತಿ ಪುರಂದರ ದಾಸರ ಸಾಹಿತ್ಯ ಅವರ ತಾತ್ವಿಕ ಹಾಗೂ ಸಾತ್ವಿಕ ಜೀವನವನ್ನು ಕುರಿತು ತಿಳಿದುಕೊಳ್ಳಬೇಕಾದಲ್ಲಿ ನಾವು ನಮ್ಮ ಸಮಗ್ರ ಜೀವನವನ್ನೇ ಅದಕ್ಕಾಗಿ ಮುಡಿಪಾಗಿಡಬೇಕಾಗುತ್ತದೆ. ದಾಸರಾಯರ ಬಗ್ಗೆ ಹೇಳಿದ ಈ ಮಾತುಗಳು ಅವರ ಉಪಾಸ್ಯ ದೇವನೆಂದೆನಿಸಿಕೊಂಡಿರುವ ತಿರುಮಲಾಧೀಶನಾದ ಶ್ರೀನಿವಾಸನ ಲೀಲಾವಿನೋದಗಳ ವಿಚಾರದಲ್ಲಿಯೂ ಅನ್ವಯವಾಗುತ್ತವೆ ಆದುದರಿಂದ ಅಗಮ್ಯ ಮಹಿಮಾಲೋಕೇ ಶ್ರೀನಿವಾಸಾಯ ತೇ ನಮಃ - ಎಂದು ಅನನ್ಯ ಭಾವದಿಂದ ಆತನಿಗೆ ಶರಣು ಹೋಗುವುದರಲ್ಲಿಯೇ ಭಕ್ತನ ಕಲ್ಯಾಣವಿದೆ ಎಂದು ಹೇಳಬಹುದು.



# ಶ್ರೀನಿವಾಸ-ತ್ಯಾಗರಾಜರು

- ಡಾ|| ಎ. ಎಸ್. ಸಂಪತ್ಕುಮಾರಾಚಾರ್ಯ.

ಸದ್ಗುರು ತ್ಯಾಗರಾಜರು (೧೭೬೭ - ೧೮೪೭) ಕರ್ನಾಟಕ ಸಂಗೀತ ಲೋಕದ ಧ್ರುವತಾರೆ ಹಾಗೂ ರಾಷ್ಟ್ರೀಯವಾಗ್ಗೇಯಕಾರರು ಅವರ ರಚನೆಗಳೆಲ್ಲವೂ ಹೃದಯದಿಂದ ಬಂದವು. ಅವರು ಗಾನಯೋಗಿ, ನಾದಯೋಗಿ, ಉನ್ನತ ತತ್ವಗಳನ್ನು ಸರಳವಾದ ಸಾಹಿತ್ಯದಲ್ಲಿ ಸುಂದರವಾದ, ಹೃದಯಂಗಮವಾದ ಸಂಗೀತದ ಮಾಧ್ಯಮದಿಂದ ತಮ್ಮ ಕೃತಿಗಳ ಮೂಲಕ ಬೋಧಿಸಿದ್ದಾರೆ. ರಾಮಭಕ್ತಿ ಸಾಮ್ರಾಜ್ಯದಲ್ಲಿ ಮುಳುಗಿ ಮಾನವತ್ವದಿಂದ ದೈವತ್ವಕ್ಕೆ ಕ್ರಮವಾಗಿ ಮುಂದುವರಿದರು ನಾದೋಪಾಸನೆಯ ಮೂಲಕ ಭಗವಂತನನ್ನು ಪಡೆಯಬಹುದು ಎಂಬುದನ್ನು ತೋರಿಸಿಕೊಟ್ಟು ಪ್ರಪಂಚದ ಒಬ್ಬ ಅತ್ಯಂತ ಶ್ರೇಷ್ಠ ದಿವ್ಯ ಸೂರಿಗಳಾಗಿದ್ದಾರೆ ಅವರು ಕರ್ನಾಟಕ ಸಂಗೀತಕ್ಕೆ ಒಂದು ಹೊಸ ಚೈತನ್ಯ ಹಾಗೂ ವರ್ಚಸ್ಸು ತುಂಬಿ ಅದನ್ನು ಪುನರುಜ್ಜೀವನಗೊಳಿಸಿ ಹೊಸದಿಕ್ಕು ತೋರಿಸಿರುವ ಮಹಾಭಕ್ತರು. ಅವರ ರಚನೆಗಳಲ್ಲಿ ರಾಗ ಸೌರಭ, ರಸಭಾವಪೂರಿತವಾದ ವೈವಿಧ್ಯತೆ ಯುಳ್ಳ ವ್ಯಾಪಕ ಗುಣ ವಿಶೇಷಗಳು ತುಂಬಿವೆ. ಅವರು ಅನುಭಾವಿಗಳು, ಸಂತರು ಹಾಗೂ ಸಮಾಜಕ್ಕೆ ಮಾರ್ಗದರ್ಶಕರು.

ತ್ಯಾಗರಾಜಸ್ವಾಮಿಗಳು ಸಂದರ್ಶಿಸಿದ ಕ್ಷೇತ್ರಗಳು ಕೆಲವೇ. ಭಗವಂತನಲ್ಲಿ ಅತಿಶಯವಾದ ಭಕ್ತಿಯು ತೀರ್ಥಗಳು ಮತ್ತು ದಿವ್ಯಕ್ಷೇತ್ರಗಳಿಗೆ ಪವಿತ್ರತೆಯನ್ನು ತಂದುಕೊಡುತ್ತದೆ. ಕೋಟಿನದುಲು (ತೋಡಿ) ಮತ್ತು ನಡಚಿ ನಡಚಿ (ಖರಹರಪ್ರಿಯ) ಎಂಬ ಕೃತಿಗಳಲ್ಲಿ ನಮ್ಮ ಹೃದಯ ನಿವಾಸಿಯಾದ ಭಗವಂತನಲ್ಲೇ ಎಲ್ಲಾ ಪವಿತ್ರತೆಯೂ ಇದೆ ಎಂಬುದನ್ನು ಅರಿಯದೆ ದೂರದಲ್ಲಿರುವ ಕ್ಷೇತ್ರಗಳು ಮತ್ತು ತೀರ್ಥಗಳಿಗೆ ಪ್ರಯಾಣ ಮಾಡುವುದು ನಿರರ್ಥಕವೆಂದು ಅವರು ಹೇಳಿದ್ದಾರೆ ಹಾಗೆಂದ ಮಾತ್ರಕ್ಕೆ ಅವರು ಪ್ರತಿದಿನವೂ ತಿರುವೈಯ್ಯಾರಿನ ದೇವಾಲಯಕ್ಕೆ ಹೋಗುತ್ತಿರಲಿಲ್ಲ ಅಥವಾ ಅಲ್ಲಿಯ ದೇವರುಗಳನ್ನು ಕುರಿತು ಭಕ್ತಿಯಿಂದ ಹಾಡಿ ಸ್ತುತಿಸಲಿಲ್ಲ ಎಂದಲ್ಲ. ಅವರು ನಾಯನಾರರು, ಆಳ್ವಾರರುಗಳು ಅಥವಾ ಅವರ ಸಮಕಾಲೀನರಾಗಿದ್ದ ಮುತ್ತು ಸ್ವಾಮಿ ದೀಕ್ಷಿತರಂತೆ ತೀರ್ಥಯಾತ್ರೆ ಮಾಡಲಿಲ್ಲ ಆದರೆ ಕೆಲವು ಕಾರಣಗಳಿಂದ ಸಮೀಪದ ಕೆಲವು ಸ್ಥಳಗಳಿಗೆ ಭೇಟಿಕೊಟ್ಟು ಅಲ್ಲಿಯ ದೇವರುಗಳನ್ನು ಕುರಿತು ಹಾಡಿದರಷ್ಟೆ.

ಕಾಂಚೀಪುರದ ಉಪನಿಷದ್ ಬ್ರಹ್ಮರು ಪೂರ್ವಾಶ್ರಮದಲ್ಲ ರಾಮಬ್ರಹ್ಮರ ಸಹಪಾಠಿಗಳಾಗಿದ್ದರು. ತಮ್ಮ ಮಿತ್ರ - ಸಹಪಾಠಿಯ ಪುತ್ರ ತ್ಯಾಗರಾಜರ ಕೀರ್ತನೆಗಳನ್ನು ಕೇಳಿ ಅವರನ್ನು ಕಾಣಬೇಕೆಂಬ ಬಂಬಲ ಉಂಟಾಯಿತು ಆಗ ಅವರಿಗೆ ಸುಮಾರು ನೂರುವರ್ಷ ವಯಸ್ಸಾಗಿತ್ತು. ಅವರು ತಿರುವೈಯ್ಯಾರಿಗೆ ಪ್ರಯಾಣಮಾಡುವ ಸ್ಥಿತಿಯಲ್ಲಿರಲಿಲ್ಲ ಆದ್ದರಿಂದ ತ್ಯಾಗರಾಜರನ್ನು ತಮ್ಮಲ್ಲಿಗೆ ಅತಿಥಿಯಾಗಿ ಬರಲು ಆಹ್ವಾನಿಸಿ ವರದಸ್ವಾಮಿಯ ಅನುಗ್ರಹವನ್ನು ಪಡೆಯುವಂತೆ ಒಂದು ಶ್ರೀಮುಖವನ್ನು ಕಳುಹಿಸಿದರು. ಉಪನಿಷದ್ ಬ್ರಹ್ಮರು ೧೦೮ ಉಪನಿಷತ್ತುಗಳಿಗೆ ವ್ಯಾಖ್ಯಾನ ಬರೆದಿದ್ದಾರೆ ಎಂಬುದನ್ನು ಇಲ್ಲಿ ಸ್ಮರಿಸಬಹುದು.



ಅಂತೆಯೇ ತ್ಯಾಗರಾಜರು ಉಪನಿಷದ್ ಬ್ರಹ್ಮರ ಶ್ರೀಮುಖದಂತೆ ಕಾಂಚೀ ಪುರಕ್ಕೆ ಹೋಗುವ ತಮ್ಮ ನಿರ್ಧಾರವನ್ನು ತಿಳಿಸಿದಾಗ ಅವರ ಹಲವು ಶಿಷ್ಯರು ಪ್ರವಾಸದಲ್ಲಿ ಇನ್ನೂ ಹಲವು ಸ್ಥಳಗಳಿಗೆ ಸಂದರ್ಶನವೀಯಬೇಕೆಂದು ಕೇಳಿಕೊಂಡರು ಅವರ ಪ್ರವಾಸದ ಕಾರ್ಯಕ್ರಮವನ್ನು ಯೋಜಿಸಲಾಯಿತು. ಶಿಷ್ಯರು ತಮ್ಮ ಗುರುವನ್ನು ಪಲ್ಲಕ್ಕಿಯಲ್ಲಿ ಕರೆದೊಯ್ದರು ಈ ಚರಿತ್ರಾರ್ಹವಾದ ಯಾತ್ರೆಯಲ್ಲಿ ತ್ಯಾಗರಾಜರ ಕೆಲವು ಹಿರಿಯ ಶಿಷ್ಯರಾದ ವಾಲಾಜಪೇಟೆ ವೆಂಕಟರಮಣ ಭಾಗವತರು, ತಂಜಾವೂರು ರಾಮರಾವ್, ತಿಲ್ಲೈಸ್ಥಾನಂ ರಾಮಯ್ಯಂಗಾರ್, ಸೋಜಿರಿ ಸೀತಾರಾಮಯ್ಯ ಮುಂತಾದವರು ಗುರುವಿನ ಸಂಗಡವಿದ್ದರು

ತ್ಯಾಗರಾಜರು ಕಾಂಚೀಪುರದ ಭೇಟಿಯನಂತರ, ವಾಲಾಜಪೇಟೆಗೆ ಭೇಟಿಯಿತ್ತು ಅಲ್ಲಿ ಹನ್ನೆರಡು ದಿನಗಳ ಕಾಲ ತಂಗಿದ್ದು ನಂತರ ತಿರುಪತಿಗೆ ಪ್ರಯಾಣ ಬೆಳೆಸಿದರು ಆ ಕಾಲದಲ್ಲಿ ತಿರುಮಲೆಗೆ ಈಗಿನಂತೆ ಯಾವ ರಸ್ತೆಯೂ ಇರಲಿಲ್ಲ ಸುಮಾರು ಏಳು ಮೈಲಿಗಳ ದೂರ ಮೆಟ್ಟಿಲುಗಳನ್ನು ಹತ್ತಿ ತಲುಪಬೇಕಾಗಿತ್ತು ಸುಮಾರು ಬೆಳಗ್ಗೆ ಹನ್ನೊಂದು ಗಂಟೆಯ ವೇಳೆಗೆ ಮೇಲೆ ತಲುಪಿ ಸ್ವಾಮಿಯ ದರ್ಶನವನ್ನು ಪಡೆಯಬೇಕೆಂಬ ಕಾತುರದಿಂದ ಶ್ರೀ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಾದಿ ಆಹ್ನಿಕಗಳನ್ನು ಮುಗಿಸಿ ದೇವಾಲಯಕ್ಕೆ ಬೇಗ ಬೇಗನೆ ಹೋದರು. ಗರ್ಭಗುಡಿಯ ಬಳಿ ಬಂದಾಗ ತೆರೆಹಾಕಿದ್ದುದನ್ನು ಕಂಡು ನಿರಾಶರಾದರು. ತಮ್ಮ ಅಹಂಕಾರವೇ ತೆರೆಯ ರೂಪದಲ್ಲಿ ಅಡ್ಡವಾಗಿದೆ ಎಂದು ಭಾವಿಸಿ, ಅತ್ಯಂತ ವಿನೀತರಾಗಿ ಗೌಳೀಪಂತುರಾಗದಲ್ಲಿರುವ "ತೆರತೀಯ್ಯ

ಗರಾದ" ಎಂಬ ಕೃತಿಯನ್ನು ಹಾಡಿದರು ಈ ಕೃತಿಯನ್ನು ಹಾಡಿ ಮುಗಿಸುವುದಕ್ಕೆ ಸರಿಯಾಗಿ ಆ ತೆರೆಯು ಕಳಚಿಬಿದ್ದು ಸ್ವಾಮಿಯ ದಿವ್ಯದರ್ಶನವು ಲಭಿಸಿತು. ಆ ಕೃತಿಯು ಹೀಗಿದೆ - ರಾಗ - ಗೌಳೀಪಂತು, ತಾಳ - ಆದಿ-

ತೆರತೀಯಗರಾದಾ ನಾಲೋನಿ,
ತಿರುಪತಿ ವೆಂಕಟರಮಣ! ಮತ್ಸರಮನು! (ತೆ)

ಪರಮ ಪುರುಷ! ಧರ್ಮಾದಿಮೋಕ್ಷಮುಲ
ಪಾರದೋಲುಚುನ್ನದಿ, ನಾಲೋನಿ! (ತೆ)

ಮತ್ಸ್ಯಮು ಆಕಲಿಗೊನಿಗಾಲಮುಚೇ
ಮಗ್ನಮೈನ ರೀತಿಯುನ್ನದಿ
ಅಚ್ಚಮೈನ ದೀಪ ಸನ್ನಿಧಿನಿಮರು
ಗಡ್ಡಪಡಿ ಚೆರದಿಸಟ್ಲುನ್ನದಿ

ಇರವೊಂಗದ ಭುಜಿಯಿಂಚು ಸಮಯಮುನ
ಈಗ ತಗುಲು ರೀತಿಯುನ್ನದಿ
ಹರಿಧ್ಯಾನಮು ಸೇಯುವೇಳ ಚಿತ್ತಮು
ಅಂತ್ಯಜುವಾಡಕು ದೋಯಿನಟ್ಲುನ್ನದಿ (ತೆ)

ವಾಗುರಯನಿ ತೆಲಿಯಕ ಮೃಗಗಣಮುಲು
ವಚ್ಚಿ ತಗುಲು ರೀತಿಯುನ್ನದಿ;
ವೇಗಮೇ ನೀಮತಮುನನುಸರಿಂಚಿ
ತ್ಯಾಗರಾಜನುತ! ಮದ ಮತ್ಸರಮುನು (ತೆ)

"ತಿರುಪತಿ ವೆಂಕಟೇಶ್ವರಾ, ನನ್ನೊಳಗಡೆ ಇರುವ ಮಾತ್ಸರ್ಯವೆಂಬ ತೆರೆಯನ್ನು ತೆಗೆಯಬಾರದೇ; ಪುರುಷೋತ್ತಮಾ! ನನ್ನೊಳಗಿರುವ ತೆರೆಯು, ಧರ್ಮ, ಅರ್ಥ, ಮೋಕ್ಷ, ಪುರುಷಾರ್ಥಗಳನ್ನು ಹೊರಗೆ ತಳ್ಳುವಂತಿದೆ, ಹಸಿವಿನಿಂದ ಮೀನು ಗಾಳದಲ್ಲಿ ಸಿಕ್ಕಿಕೊಂಡ ರೀತಿಯಲ್ಲಿ ನನ್ನ ಸ್ಥಿತಿಯಾಗಿದೆ; ಚೆನ್ನಾಗಿ ಊಟಮಾಡುತ್ತಿರುವಾಗ ಆಹಾರದಲ್ಲಿ ನೊಣವು ಬಿದ್ದರೀತಿಯಲ್ಲಿ, ಪ್ರಕಾಶಮಾನವಾದ ದೇವರಿಗೂ ಮಧ್ಯೆ ತೆರೆಯು ಅಡ್ಡವಾಗಿದೆ; ಪರಮಾತ್ಮನನ್ನು ಭಜಿಸುವ ಸಮಯದಲ್ಲಿ ಮನಸ್ಸು ಚಂಡಾಲ ಬೀದಿಗೆ ಹೋದಂತೆ ಇದೆ, ಬಲೆಯೆಂದು ತಿಳಿಯದೆ, ಮೃಗಸಮೂಹವು ಬಂದು ಸಿಕ್ಕಿಕೊಂಡಂತೆ ಈ ತೆರೆಯು ಇದೆ, ತ್ಯಾಗರಾಜನು ಸ್ತುತಿಸುವ ವೆಂಕಟೇಶಾ! ನಿನ್ನ ಮತವನ್ನು ಅನುಸರಿಸುತ್ತಿದ್ದೇನೆ, ಬೇಗ ಮದ ಮತ್ಸರವೆಂಬ ತೆರೆಯನ್ನು ತೆಗೆಯಬಾರದೇ!"

ತ್ಯಾಗರಾಜಸ್ವಾಮಿಯು ವೆಂಕಟೇಶ್ವರನ ಗರ್ಭಗುಡಿಯ ಮುಂದೆ ನಿಂತಾಗ ಆ ಸಮಯದಲ್ಲಿ ತಿರುವಾರಾಧನ ಮತ್ತು ನೈವೇದ್ಯ ಸಮರ್ಪಣೆಗಾಗಿ ತೆರೆಹಾಕಿದ್ದರು ಭಾವುಕ ಭಕ್ತರಾದ ತ್ಯಾಗರಾಜರು ತನ್ನಲ್ಲಿರುವ ಮತ್ಸರವೇ ತೆರೆಯ ರೂಪದಲ್ಲಿ ದರ್ಶನಕ್ಕೆ ಅಡ್ಡಿಯಾಗಿದೆ. ಅದನ್ನು ನಿವಾರಿಸಿ ದರ್ಶನ ನೀಡಬೇಕೆಂದು ಅತ್ಯಂತ ವಿನೀತಭಾವದಿಂದ ಪ್ರಾರ್ಥಿಸಿದರು ತನ್ನ ಚಿತ್ತದಲ್ಲಿ ಏನೋ ಅಹಂಕಾರವಿಕಾರವಿದೆ, ಅದೇ ತೆರೆಯಾಗಿ ಅಡ್ಡಲಾಗಿದೆ ಎಂದು ಭಾವಿಸಿ ಪರಮಭಕ್ತರಾದ ತ್ಯಾಗರಾಜಸ್ವಾಮಿಯು ವೆಂಕಟೇಶ್ವರನ ದರ್ಶನಕ್ಕಾಗಿ ವಿಳಂಬ ಹಾಗೂ ಅಡಚಣೆಯನ್ನು ಸಹಿಸಲಾರದೆ ಈ ಕೃತಿಯನ್ನು ಹಾಡುವುದರ ಮೂಲಕ ತಮ್ಮ ಮನೋವೇದನೆಯನ್ನು ತೋಡಿಕೊಂಡು ಪ್ರಾರ್ಥಿಸಿದರು ಅರಿಷಡ್ವರ್ಗಗಳು ನಮ್ಮ ಹೃದಯಕ್ಕೆ ತೆರೆಯಾಗಿದ್ದು ಭಗವಂತನ ದರ್ಶನಕ್ಕೆ ಅಡ್ಡಿಯಾಗಿವೆ. ಅವುಗಳನ್ನು ನಿವಾರಿಸಿಕೊಳ್ಳಲು ಮತ್ತು ಭಗವಂತನ ದರ್ಶನ ಪಡೆಯಲು ಅವನ ಕೃಪೆ ಬೇಕು ಎಂದು ಭಾವ ಈ ಕೃತಿಯಲ್ಲಿ ತ್ಯಾಗರಾಜರು ದೇವರ ಮುಂದೆ ಇದ್ದ ತೆರೆಯನ್ನು ಕುರಿತು ನೇರವಾಗಿ ಹೇಳಿಲ್ಲ ಒಳಗಿನ ಆ ದಿವ್ಯ ಜ್ಯೋತಿಯು ಕಾಣದಂತೆ ಅಡ್ಡವಾಗಿರುವ ಅಹಂಕಾರ ಮತ್ತು ಅಸಹನೆ ಎಂಬ ತೆರೆಯನ್ನು ತೆಗೆದು ಹಾಕುವಂತೆ ಶೇಷಾಚಲನಾಯಕನನ್ನು ಪ್ರಾರ್ಥಿಸಿದ್ದಾರೆ, ಹಾಡುವುದು ಮುಗಿಯುವ ವೇಳೆಗೆ ಸರಿಯಾಗಿ ತೆರೆಬಿದ್ದಿತು ಅರ್ಚಕರೂ, ಅಧಿಕಾರಿಗಳೂ ಅವರ ಭಾವಪೂರ್ಣವಾದ ಗಾಯನದಿಂದ ಆಕರ್ಷಿತರಾಗಿ ಅಲ್ಲಿ ಸೇರಿದರು. ಅನಂತರ ವೆಂಕಟೇಶ್ವರನ, ದಿವ್ಯ ದರ್ಶನ ಆನಂದ ಪರವಶರಾಗಿ 'ವೆಂಕಟೇಶ ನಿನು ಸೇವಿಂಪ' (ಮಧ್ಯಮಾವತಿ) ಎಂಬ ಮತ್ತೊಂದು ಕೃತಿಯನ್ನು ಹಾಡಿದರು. (ಈ ಮಹಾಗಾಯಕರೇ ಮಹಾಪುರುಷರಾದ ತ್ಯಾಗರಾಜರೆಂದು ತಿಳಿದು ಅವರನ್ನು ಗೌರವಿಸಿದರು) ಅವರು ಆನಂದದಿಂದ ಹಾಡಿದ ಕೃ



ರಾಗ - ಮಧ್ಯಮಾವತಿ, ತಾಳ - ಆದಿ

ವೇಂಕಟೇಶಾ ನಿನು ಸೇವಿಂಪನು ಪದಿ
ವೇಲಕನುಲು ಕಾವಲೆನಯ್ಯ! (ವೇಂ)

ಪಂಕಜಾಕ್ಷ ಪರಿಪಾಲಿತ ಮುನಿಜನ
ಭಾವುಕಮಗು ದಿವ್ಯರೂಪಮುನು ಕನಿ!

ಎಕ್ಕುವ ನೀವನಿ ದಿಕ್ಕುಲು ಪೊಗಡಗ
ಅಕ್ಕರಗೊನಿ ಮದಿಸೊಕ್ಕಿ ಕನುಗೊನ
ನಿಕ್ಕಮು ನೀವೇ ಗ್ರಕ್ಕುನ ದ್ರೋವು ತ-
ಳುಕ್ಕನಿ ಮೆರಸೇ ಚಿಕ್ಕತನಮುಗಲ! (ವೇಂ)

ಏ ನೋಮು ಫಲಮೋ ನೀ ನಾಮಾಮೃತ
ಪಾನಮು ಅನು ಸೋಪಾನಮು ದೊರಿಕೆನು
ಶ್ರೀನಾಯಕ ಪರಮಾನಂದ ನೀ ಸರಿ
ಗಾನಮು ಶೋಭಾಯಮಾನಾಂಘ್ರುಲು ಗಲ!

ಯೋಗಿ ಹೃದಯ ನೀವೇ ಗತಿಯನು ಜನ
ಭಾಗಧೇಯ ವರಭೋಗೀಶ ಶಯನ
ಭಾಗವತಪ್ರಿಯ ತ್ಯಾಗರಾಜನುತ
ನಾಗಾಚಲಮುಪೈ ಬಾಗುಗ ನೆಲಕೊನ್ನ!
(ವೇಂ)

"ಓ ವೆಂಕಟೇಶನೇ! ಶೇಷಾಚಲವಾಸಿಯೇ! ಮುನಿಜನ ಹೃದಯವಾಸಿಯೇ! ನಿನ್ನ ದಿವ್ಯರೂಪವನ್ನು ನೋಡಲು ಸಾವಿರಾರು ಕಣ್ಣುಗಳಿದ್ದರೂ ಸಾಲದು! ನೀನೇ ಭಗವಂತನೆಂದು ಎಲ್ಲದಿಕ್ಕುಗಳಲ್ಲೂ ಸ್ತುತಿಸುತ್ತಾರೆ. ನಿನ್ನ ದರ್ಶನ ಮಾತ್ರದಿಂದಲೇ ನಿನ್ನ ಭಕ್ತರಿಗೆ ಮೋಕ್ಷಸಿದ್ಧಿಯಾಗುತ್ತದೆ. ನನ್ನ ಯಾವುದೋ ಸುಕೃತದಿಂದ ನಿನ್ನ ನಾಮಾಮೃತವು ಲಭಿಸಿದೆ; ಅದರ ಸೋಪಾನದಿಂದ ನಿನ್ನ ಬಳಿಗೆ ಬರಲು ಸಾಧ್ಯವಾಯಿತು. ಶ್ರೀನಾಯಕನೇ! ನಿನ್ನ ಪಾದಕಮಲಗಳು ಎಷ್ಟು ಶೋಭಾಯಮಾನವಾಗಿವೆ! ಭಾಗವತ ಪ್ರಿಯನೇ! ತ್ಯಾಗರಾಜನಿಂದ ಸ್ತುತಿಸಲ್ಪಡುವವನೇ! ನೀನೇ ಗತಿ."

ತ್ಯಾಗರಾಜಸ್ವಾಮಿಯು 'ಕಲೌ ವೇಂಕಟನಾಯಕಃ' ಎಂಬಂತೆ ಸ್ವಾಮಿಯ ದರ್ಶನ ಮಾಡಿ ಆನಂದಾತಿಶಯದಿಂದ ಆ ಭಗವಂತನನ್ನು ಕೀರ್ತಿಸಿದ್ದಾರೆ. ಸರ್ವದೇವತಾ ಸ್ವರೂಪನಾದ ಶ್ರೀನಿವಾಸನು ತನ್ನ ದರ್ಶನ ಮಾತ್ರದಿಂದಲೇ ಪ್ರೀತಿಯಿಂದ ವರಪ್ರಸಾದಿಸುವ ಮೂರ್ತಿ. ತನ್ನ ಜನ್ಮಾಂತರದ ಸತ್ಕರ್ಮಫಲದಿಂದ ಆ ಶ್ರಿಯಃಪತಿಯ ದಿವ್ಯ ಸೌಂದರ್ಯ ದರ್ಶನವೂ ಅವನ ದಿವ್ಯ ನಾಮಾಮೃತವೆಂಬ ಸೋಪಾನವು ದೊರಕಿದೆ. ಪಾಪಗಳನ್ನು ಪರಿಹರಿಸುವವನಾದ್ದರಿಂದ ಅವನಿಗೆ ವೆಂಕಟೇಶ ಎಂಬ ಹೆಸರು ಬಂದಿದೆ. ಶ್ರೀನಾಯಕನಾದ ವೇಂಕಟೇಶ್ವರನು ಪ್ರತ್ಯೇಕ ವ್ಯಕ್ತಿತ್ವವುಳ್ಳ ಸರ್ವಲೋಕ ಶರಣ್ಯನೆಂದು ಯೋಗಿಗಳು ಕೀರ್ತಿಸಿದ್ದಾರೆ. ಇವನನ್ನು ಉಪಾಸಿಸುವ, ಸೇವಿಸುವ ಪರಮಭಾಗವತರಿಗೆ ಇವನು ಪ್ರಿಯನು. ಸಪ್ತಗಿರಿಯಾದ ಶೇಷಾಚಲದಲ್ಲಿ ನೆಲೆಸಿರುವ ಭೋಗಶಯನನನ್ನು ದರ್ಶನ ಮಾಡಲು ಅವಶ್ಯಕವಾದ ದೃಷ್ಟಿಯನ್ನು ಅನುಗ್ರಹಿಸಬೇಕೆಂದು ಈ ಕೃತಿಯಲ್ಲಿ ಪ್ರಾರ್ಥಿಸಿದ್ದಾರೆ. ನಾಗಾಚಲ ಎಂಬ ಕ್ಷೇತ್ರ ಮುದ್ರೆಯನ್ನು ಬಳಸಿರುವುದು ಗಮನಾರ್ಹ.

ತ್ಯಾಗರಾಜಸ್ವಾಮಿಯು 'ತರಮಾ ನೀಮಹಿಮಾ' ಎಂಬ ಮತ್ತೊಂದು ಕೃತಿಯಲ್ಲಿ ವೆಂಕಟೇಶ್ವರನನ್ನು ಸ್ತುತಿಸಿದ್ದಾರೆ

ರಾಗ - ಕಲ್ಯಾಣಿ, ತಾಳ - ರೂಪಕ

ತರಮಾ ನೀ ಮಹಿಮ
ಪೊಗಡ ತಾರಾಧಿಪಾನನ! (ತ)

ಸುರನಾಥ ಸರೋಜಾಸನ
ವರಲಂಬೋದರಾದಿ
ಸುರ ಸೇವಿತ ಶ್ರೀನಿವಾಸ
ತಿರುಪತೀಶ ಸರ್ವೇಶ! (ತ)

ಶೇಷಗಿರಿ ಸದನ ಶ್ರೀಪತಿ
ನೀವೇ ಗಾದಾ ನಾಗ
ಭೂಷಣುಡು ನೀ ಮಿತ್ರುಡು ಗಾದಾ ನಾಥಾ
ದೋಷರಹಿತ ಮನಸುನ
ಭಕ್ತಿಲೇನಿ ವಾರ್ಕೆನ
ವೇಷಧಾರುಲಕು
ತ್ಯಾಗರಾಜವಿನುತ ಸರ್ವೇಶ! (ತ)

"ತಿರುಪತಿ ಪುರವಾಸಿಯಾದ ಶ್ರೀನಿವಾಸನೇ! ಚಂದ್ರನಂತೆ ಮುಖಕಮಲವುಳ್ಳ ನಿನ್ನ ಮಹಿಮೆಯನ್ನು ಸ್ತುತಿಸಲು ಸಾಧ್ಯವೇ? ಬ್ರಹ್ಮ ಗಣೇಶಾದಿ ದೇವತೆಗಳಿಂದ ಸೇವಿಸಲ್ಪಡುವವನೇ; ಸರ್ವೇಶ್ವರನೇ, ಶೇಷಗಿರಿವಾಸನೇ, ಶ್ರೀಪತಿಯು ನೀನೇ ಅಲ್ಲವೇ! ನಾಗಭೂಷಣನಾದ ಪರಮಶಿವನ ಮಿತ್ರನು ನೀನಲ್ಲವೇ, ದೋಷರಹಿತನಾದ ತ್ಯಾಗರಾಜನಿಂದ ಪೂಜಿಸಲ್ಪಟ್ಟ ನಿನ್ನ ಮಹಿಮೆಯನ್ನು ಮನಸ್ಸಿನಲ್ಲಿ ಭಕ್ತಿಯಿಲ್ಲದೆ ವೇಷಧಾರಿಗಳಾದವರು ವರ್ಣಿಸಲು ಸಾಧ್ಯವೇ?"

ತ್ಯಾಗರಾಜರು ಸುಂದರವಾದ ಈ ಕೃತಿಯಲ್ಲಿ ತಿರುಪತೀಶನಾದ ಶ್ರೀನಿವಾಸನನ್ನು ಸೊಗಸಾಗಿ ಸ್ತುತಿಸಿದ್ದಾರೆ. ಇಂದ್ರ, ಬ್ರಹ್ಮಾದಿ ದೇವತೆಗಳಿಗೂ ಅವನ ಮಹಿಮೆಯನ್ನು ವರ್ಣಿಸಲು ಸಾಧ್ಯವಿಲ್ಲ. ಅವರಿಗೂ ಸಹ ಅವನ ಮಹಿಮೆಯು ತಿಳಿಯದು. ಹೀಗಿರುವಾಗ ವೇಷಧಾರಿಗಳಾದ ತೋರಿಕೆ ಭಕ್ತರಿಗೆ ತಿಳಿಯಲು ಸಾಧ್ಯವೇ ಇಲ್ಲ. ನಿಜ ಭಕ್ತಿಯಿದ್ದರೇ ಮಾತ್ರಸಾಧ್ಯ. ಅವನ ಮಹಿಮೆಯ ಅರ್ಥವರಿತು ಆನಂದಾನುಭವವನ್ನು ಪಡೆಯಬೇಕೆಂದು ಬೋಧಿಸಿದ್ದಾರೆ.

ಬೆಟ್ಟಗಳು ದೇವತಾ ಸಾನ್ನಿಧ್ಯವುಳ್ಳ ಸ್ಥಾನಗಳೆಂದು ಹಿಂದಿನಿಂದ ಬಂದಿರುವ ನಂಬಿಕೆ. ತಿರುಮಲೆ ಎನ್ನುವುದು ಏಳು ಬೆಟ್ಟಗಳ - ಸಪ್ತಗಿರಿಯ - ಸಮೂಹ. ಈ ಬೆಟ್ಟಗಳ ಸಾಲು ಆದಿಶೇಷನ ಏಳು ಹೆಡೆಗಳಂತಿವೆ. ತಿರುಮಲೆಗೆ ತಿರುವೇಂಗಡ, ವಡಮಲೈ, ವೇಂಕಟಾಚಲ, ಗರುಡಾದ್ರಿ, ಶೇಷಾದ್ರಿ, ಅಂಜನಾದ್ರಿ, ವೆಂಕಟಾಚಲ, ನಾರಾಯಣಾದ್ರಿ, ವೃಷಭಾದ್ರಿ, ವೆಂಕಟಾದ್ರಿ ಎಂಬ ಅನೇಕ ಹೆಸರುಗಳಿರುವಂತೆಯೇ ಇಲ್ಲಿಯ ದೇವರನ್ನು ವೆಂಕಟೇಶ, ಬಾಲಾಜಿ, ಸಪ್ತಗಿರಿದೇವ, ತಿರುವೇಂಗಡಮುಡೈಯಾನ್, ಶ್ರೀನಿವಾಸ, ತಿರುವೇಂಗಡತ್ತಾನ್ - ಎಂಬ ಹೆಸರುಗಳಿಂದ ಕರೆಯಲಾಗುತ್ತಿದೆ. ವೆಂಕಟಾಚಲಪತಿಯನ್ನು ಮಧುರಕವಿ ಆಳ್ವಾರ್ ವಿನಹ ಉಳಿದೆಲ್ಲ ಆಳ್ವಾರರೂ ಹಾಡಿ ಮಂಗಳಾಶಾಸನ ಮಾಡಿದ್ದಾರೆ. ಅಂತೆಯೇ ವೆಂಕಟಾಚಲಪತಿಯ ಪ್ರಸ್ತಾಪ ಸ್ಪಷ್ಟವಾಗಿ ಮೊಟ್ಟಮೊದಲು ಆಳ್ವಾರರ ದಿವ್ಯಪ್ರಬಂಧದಲ್ಲಿ ವ್ಯಕ್ತವಾಗಿದೆ. ಇದರ ಆಧಾರದಲ್ಲಿ ತ್ಯಾಗರಾಜಸ್ವಾಮಿಯು 'ನಾಗಾಚಲದ ಮೇಲೆ ಸ್ಥಿರವಾಗಿರುವ' - 'ನಾಗಾಚಲಮುಪೈ ಬಾಗುಗ ನೆಲಕೊನ್ನ' ಎಂದು ಹಾಡಿದ್ದಾರೆ. ಈ ಕೃತಿಗಳಲ್ಲಿ ತಿರುಪತಿ ಅಥವಾ ನಾಗಾಚಲ ಎಂಬ ಕ್ಷೇತ್ರಮುದ್ರೆಯಿದೆ. ಗೌಳೀಪಂತು ಮತ್ತು ಮಧ್ಯಮಾವತಿರಾಗಗಳು ಮಧ್ಯಾಹ್ನದ ರಾಗಗಳೆಂಬುದು ಪ್ರಸ್ತುತ ಗಮನಾರ್ಹ, ಕಲ್ಯಾಣಿ ರಾಗವು ಸಾರ್ವಕಾಲಿಕ ಮಂಗಳಕರ ರಾಗ.

ತ್ಯಾಗರಾಜರಿಗೆ 'ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ' ಎಂಬ ಗೀತಾಚಾರ್ಯನ ಉಕ್ತಿಯಂತೆ, ಅವರ ಪೂರ್ವ ಪುಣ್ಯದಿಂದ, ವೆಂಕಟೇಶನ ನಾಮಾಮೃತ ಸಾಧನವು ದೊರಕಿತು. ಸಿದ್ಧಿ ಪಡೆಯ ಧನ್ಯವಾಗಿ, ನಾವೂ ಧನ್ಯರಾಗಬೇಕೆಂದು ಮಾರ್ಗದರ್ಶನ ಮಾಡಿದ್ದಾರೆ. ಅವರು ತೋರಿಸಿರುವ ಮಾರ್ಗದಲ್ಲಿ ನಡೆದು ನಾವೂ ಧನ್ಯರಾಗೋಣ.





ಮುತ್ತಿನ ಕವಚದಲ್ಲಿ ಸ್ವಾಮಿ

# ಸಪ್ತಗಿರೀಶನ ಮಹಿಮೆ



ಸೂರ್ಯ ಪ್ರಭ ವಾಹನದಲ್ಲಿ ಸ್ವಾಮಿ.

- ಪ್ರೊ. ಸಿ. ಗೋವಿಂದಾಚಾರ್

ಈ ಕಲಿಯುಗದಲ್ಲಿ ಕೇವಲ ಭಜನೆ ಕೀರ್ತನೆ ಸ್ತೋತ್ರ ಪಠಣಗಳಿಂದಲೇ ಭಗವದುಪಾಸನೆಯ ಫಲವನ್ನು ಪಡೆಯಬಹುದೆಂದು ಭಗವಂತನೇ ಹೇಳಿರುತ್ತಾನೆ ಗದ್ಯ, ಪದ್ಯ, ಶ್ಲೋಕರೂಪಗಳಲ್ಲಿರುವ ಈ ಸ್ತೋತ್ರಗಳು ಭಗವನ್ಮಹಿಮೆಯನ್ನೂ ಗುಣಾತಿಶಯಗಳನ್ನು ಪ್ರತಿಪಾದಿಸುತ್ತವೆ ಭಕ್ತನು ಅಕಿಂಚನನಾಗಿ ಕೃಪೆಗಾಗಿ ವಿವಿಧ ರೀತಿಯಲ್ಲಿ ಪ್ರಾರ್ಥಿಸಿ ಮಂಗಳವನ್ನು ಹಾಡುವನು ಋಷಿಗಳು, ಸಂತರು, ಧರ್ಮಸಂಸ್ಥಾಪಕರು ಸಂಸ್ಕೃತ ಭಾಷೆಯಲ್ಲಿ ಸ್ತೋತ್ರಗಳನ್ನು ರಚಿಸಿ ಒಂದು ಪರಂಪರೆಯನ್ನೇ ಸೃಷ್ಟಿಸಿರುತ್ತಾರೆ ಕಾಲಕ್ರಮೇಣ ವಿವಿಧ ಭಾಷೆಗಳಲ್ಲಿ ಇವು ಪ್ರಸರಿಸಿದುವು. ಸ್ತೋತ್ರ ಸಾಹಿತ್ಯದ ಸಮುದ್ರವೇ ಇದೆ ಎಂದು ನಾವು ಅಂದುಕೊಂಡರೆ ಭಗವಂತನೆಂಬ ಮಹಾ ಸಾಗರದಲ್ಲಿ ಇದು ಒಂದು ಬಿಂದು ಇದ್ದಂತೆ. 'ತೇಪಿ ಸದಾಸ್ತುವಂತ' ಎಂದು ಯಾಮುನರು ಹೇಳಿದಂತೆ ಪ್ರಥಮ ಸ್ತೋತ್ರ ಸಾಹಿತ್ಯವಾದ ಶ್ರುತಿಗಳು ಆದಿ ಮಧ್ಯಾಂತರಹಿತನಾದ ಭಗವಂತನನ್ನು ಇನ್ನೂ ಸ್ತುತಿಸುತ್ತಲೇ ಇವೆಯಂತೆ. ಇದಕ್ಕೆ ಕೊನೆಯೇ ಇಲ್ಲವಂತೆ ಶ್ರೀನಿವಾಸನ ದಯಾವೈಭವವನ್ನು ಅವು ಇನ್ನೂ ಆರಂಭಿಸಿವೆಯಂತೆ "ವೃಷಗಿರೀಶದಯೇ ಭವತ್ಯಾಂ ಆರಂಭಮಾತ್ರಂ" - ದಯಾಶತಕ ೧೦೨. ಸ್ತವ್ಯ: ಸ್ತವಪ್ರಿಯಃ ಸ್ತೋತ್ರಂ ಸ್ತುತಿಃ ಸ್ತೋತಾರಣಪ್ರಿಯಃ ಎಂದು ವಿಷ್ಣು ಸಹಸ್ರನಾಮದಲ್ಲಿ ಹೇಳಿರುವಂತೆ ಭಗವಂತನು ಸ್ತುತಿಪ್ರಿಯನಾಗಿದ್ದಾನೆ ವಿಶ್ವಪತಿಯಾಗಿರುವುದರಿಂದ ಅವನೊಬ್ಬನೇ ಸ್ತೋತ್ರಕ್ಕೆಯೋಗ್ಯವಾಗಿದ್ದಾನೆ. ಭಕ್ತರಿಂದ ಸಂಕೀರ್ತನಾದಿಗಳನ್ನು ಅವನು ಎದುರು ನೋಡುವನು.

ಶ್ರೀನಿವಾಸ ಭಗವಾನನನ್ನು ಕುರಿತ ಸ್ತೋತ್ರಗಳ ಪೈಕಿ ಮೂಲವಾಗಿ ದೇಶಿಕರ ಎ) ದಯಾಶತಕ, ಬಿ) ತಮಿಳಿನಲ್ಲಿ ವೆಂಕಟೇಶ ಸುಪ್ರಭಾತ, ಹರಿವಂಶದ ವೆಂಕಟಾಚಲ ಮಹಾತ್ಮೆ ಹಾಗೂ ಸುಪ್ರಸಿದ್ಧವಾದ ವೆಂಕಟೇಶ ಸುಪ್ರಭಾತಗಳನ್ನು ಇಲ್ಲಿ ಆಧರಿಸಲಾಗಿದೆ ದೇಶಿಕರ ದಯಾಶತಕ ಶ್ಲೋಕ ರೂಪದಲ್ಲಿದೆ. ಇದೊಂದು ಭಾವಗೀತೆ. ಶ್ರೀನಿವಾಸನಲ್ಲಿ



ಚಂದ್ರಪ್ರಭ ವಾಹನದಲ್ಲಿ ಸ್ವಾಮಿ

ರುವ ದಯಾಗುಣವನ್ನೇ ಅವನ ಭಾರ್ಯೆಯಾಗಿ ಭಾವಿಸಿಕೊಂಡು ದಯಾಗುಣದ ವಿವಿದ ಪ್ರಾಕಾರಗಳನ್ನೂ ವಿನ್ಯಾಸಗಳನ್ನೂ ಗಂಭೀರವಾಗಿಯೂ ಭಕ್ತಿಪ್ರಬೋದಕವಾಗಿಯೂ ವರ್ಣಿಸಿರುತ್ತಾರೆ ಈ ಸ್ತೋತ್ರ ಕೃತಿಯು ಪುರಾಣೇತಿಹಾಸ, ವೇದಾಂತವಿಚಾರ ಹಾಗೂ ಆಳ್ವಾರರ ಸೂಕ್ತಿಗಳ ಸಂಗಮವೇ ಆಗಿದೆ

ಕೌಸಲ್ಯಾ ಸುಪ್ರಜಾರಾಮ ಪೂರ್ವಾ ಸಂಧ್ಯಾಪ್ರವರ್ಧತೆ - ಎಂದು ನಮ್ಮ ಕಿವಿಗೆ ಬಿದ್ದಾಗ ಮಹರ್ಷಿಗಳು ರಾಮನನ್ನು ಸ್ತುತಿಸಿದ್ದು ಮನಸಿಗೆ ಬಾರದು ನಮ್ಮ ಮನಸಿಗೆ ಬರುವುದು ಎ) ಶ್ರೀನಿವಾಸ, ಬಿ) ಎದ್ದು ದೈನಂದಿನಕಾರ್ಯಗಳಲ್ಲಿ ತೊಡಗಬೇಕು ಎಂಬ ಅರಿವು. ಪ್ರತಿದಿನ ಕಿವಿಗೆ ಬಿದ್ದಲ್ಲಿ ಪಾಮರರಿಗೆ ಸಂಸ್ಕೃತ ಭಾಷೆಯ ಬಗ್ಗೆ ತಿಳಿದುಕೊಳ್ಳಲು ಅವಕಾಶವಾಗುವುದು ಸ್ತೋತ್ರ ಸಾಹಿತ್ಯದಲ್ಲಿ ವೆಂಕಟೇಶ್ವರನು ಯಾವರೀತಿ ರಾರಾಜಿಸುತ್ತಿದ್ದಾನೆ ಎಂಬುದನ್ನು ಈಗ ನೋಡೋಣ

## ಮಹಾಸಂಕಲ್ಪ-ದಿವ್ಯನೆಲೆ-ಮಹಾತ್ಮೆ:

ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಎಂಬ ಮಹಾ ಸಂಕಲ್ಪದಂತೆಯೇ ಭಗವನ್ನಾರಾಯಣನು ಚೇತನೋದ್ಧಾರ, ಆಶ್ರಿತ ಸಂರಕ್ಷಣೆ ಹಾಗೂ ಕಲಿಯ ಪ್ರಭಾವವನ್ನು ನಿರ್ಮೂಲ ಮಾಡಲು, ಕ್ಷೀರಾರ್ಣವನ್ನು ತೊರೆದು ಶೇಷಾದ್ರಿಯಲ್ಲಿ ನೆಲೆಸಿದನು ಎಂದು ಅನಂತವಾಗಿ ಹೇಳಲ್ಪಟ್ಟಿದೆ

ಎ) ಶ್ರೀ ವೈಕುಂಠವಿರಕ್ತಾಯಸ್ವಾಮಿ ಪುಷ್ಕರಿಣೀತಟೇ - ವೆಂಕಟೇಶ ಸುಪ್ರಭಾತ

ಬಿ) ಪ್ರಶಮಿತ ಕಲಿದೋಷಾಂ ವೆಂಕಟಾದ್ರೌ - ದೇಶಿಕರ ದಿವ್ಯದೇಶಮಂಗಳಾಶಾಸನ

ಸಿ) ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠಮುತ್ತಮ ಮ್, ಸ್ವಾಮಿಪುಷ್ಕರಿಣೀ ತೀರೆ ರಮಯಾ ಸಹಮೋದತೆ - ವೆಂಕಟಾಚಲ ಮಹಾತ್ಮೆ

ಈ ಮಹಾ ಸಂಕಲ್ಪಕ್ಕೆ ಅವನ ಕರುಣೆಯೇ ಕಾರಣ ಭಗವದವತಾರಗಳಲ್ಲಿ ಹಾಗೂ ಚೇತನನ ಮುಕ್ತಿದೆಶೆಯಲ್ಲಿ ದಯಾದೇವಿಯು ವಾಣಿಯಾಗಿರುತ್ತಾಳೆ ಅವಳನ್ನು ತೃಪ್ತಿಪಡಿಸಲೆಂದೇ ಇಲ್ಲಿ ಅರ್ಚೆಯಲ್ಲಿ ಸಂಭವಿಸಿದ್ದಾನೆ - ದಯಾಶತಕ ೭೩, ೪೩ ಆ ಲಕ್ಷ್ಮಿ ನಾರಾಯಣನೇ ಇಲ್ಲಿ ಗಿರಿಯೊಡೆಯನಾಗಿದ್ದಾನೆ ಎಂದು ಪುರಂದರದಾ

ದಾಸನ ಮಾಡಿಕೋ ಎನ್ನ ಸ್ವಾಮಿ
ಸಾಸಿರ ನಾಮದ ವೆಂಕಟರಮಣ
**- ಪುರಂದರದಾಸ.**



ಮೋಹಿನೀ ಅವತಾರದಲ್ಲಿ ಸ್ವಾಮಿ
ಶ್ರೀ ವೆಂಕಟೇಶಾ ಸಲಹು ವೆಂಕಟೇಶಾ
ಭಾವಿತ ಸೇವಕ ಭವಭಯ ನಾಶಾ
**- ಪ್ರಸನ್ನ ವೆಂಕಟದಾಸ.**

[illegible] [illegible] ಗಿರಿಯೊಪೆಯು - ಎಂದು [illegible] ತುಂಬುವ ವೆಂಕಟಾದ್ರಿಯೇ ಈ ಕಲಿಯುಗದಲ್ಲಿ ವಿಷ್ಣುವಿನ ವಾಸಸ್ಥಾನ ಎಂದು ದೇಶಿಕರು ಹಂಸ ಸಂದೇಶದಲ್ಲಿ ಹೇಳಿ ಅಂಜನಾದ್ರಿಯು ಕನಕ ಮುಖರೀನದಿ ತೀರದಲ್ಲಿದೆ ಎಂದು ಗುರುತಿಸಿದ್ದಾರೆ ಪ್ರಸನ್ನ ವೆಂಕಟದಾಸರೂ ಹೀಗೆಯೇ ಹೇಳಿರುತ್ತಾರೆ

ಇಳೆಯ ಭಕ್ತರ ನೋಡಿದ
ವೈಕುಂಠದಿಂದಿಳಿದು ಬಂದು
ಸುವರ್ಣ ಮುಖರಿಯಾತೀರದಿ
ಬಂದು ನಿಂತ ತಿಮ್ಮಯ್ಯ

ಎರಡನೆ ತಿರುವಂದಾದಿಯಲ್ಲಿ - ಪಂಡು ಅಮರರ್ಕು ಈಂದ ಪಡಿ ಅಮರರ್ ಏಳುಂಪತಿ - ಎಂದು ಭೂತಾಳ್ವಾರರು ಶ್ರೀನಿವಾಸ ನೆಲೆಯನ್ನು ಹಾಡಿರುತ್ತಾರೆ ತಿಮ್ಮ ಕವಿಯೂ 'ಸ್ವರ್ಣಮುಖಿ ತೀರ' ಎಂದು ವೆಂಕಟಗಿರಿ ಮಹಾತ್ಮೆಯಲ್ಲಿ ಉಲ್ಲೇಖಿಸಿರುತ್ತಾನೆ ತಾನೇ ಬಯಸಿಬಂದು ಇಲ್ಲಿ ನೆಲೆಸಿದ್ದರಿಂದ ಇಡಿ ಪರ್ವತಕ್ಕೇ ಪವಿತ್ರತೆ ಉಂಟಾಯಿತು ವೆಂಕಟನಿಗಿಂತಾ ವೆಂಕಟಾದ್ರಿಯೇ ಹೆಚ್ಚೆಂದು ಇಲ್ಲಿ ವಿಶೇಷಾರ್ಥ ಈ ಭುವಿಯ ಜನರು ನಿನ್ನ ಆಲಯ ಗೋಪುರವನ್ನೋ ಅಥವ ಪರ್ವತಶಿಖರವನ್ನೋ ನೋಡಿದರೆ ಸಾಕು ಅವರು ಮುಮುಕ್ಷುಗಳಾಗುವರು ಎಂದು ಸುಪ್ರಭಾತದಲ್ಲಿದೆ - ತ್ವದ್ಗೋಪುರಾಗ್ರ ಶಿಖರಾಣಿ ನಿರೀಕ್ಷಮಾಣ

'ನನ್ನ ಮಗಳು ವೇಂಗಡವೇ ವೇಂಗಡವೇ ಎಂದು ಕನವರಿಸುವಳು' ಎಂದು ಕಲಿಯನರು ನಾಯಕಿ ಭಾವದಲ್ಲಿ ಹೇಳುವರು (ಪೆ ತಿ 5-5-10) ವೆಂಕಟಾದ್ರಿ ಶಿಖರಾಲಯ ಎಂಬ ಪದಕ್ಕೆ ಮಿನ್ನಾರ್ ಮುಹಿಲ್ ಶೇರ್ (ಮೇರುವಿನಂತೆ ಭಾವ) ಎಂದಿದ್ದಾರೆ - ಪೆ ತಿ 1-10-6 ದೇವತೆಗಳ ಮನುಷ್ಯರ ಪಾಪಗಳನ್ನು ಪರಿಹರಿಸಿ ಅವರನ್ನು ಪಾವನಗೊಳಿಸುವ ದೆಟ್ಟ ಇದು ಎಂದು ದೇಶಿಕರು ಹೇಳುವರು

ಕಡು ವಿನ್ನೈಯುರಿಯ ವಿನ್ನೈಯುಮ್
ಕಡಿಯುಮ್ ವೆರ್ಪು



ಶ್ರೀದೇವಿ ಭೂದೇವಿಯರೊಡನೆ ಸ್ವಾಮಿ.

ವಿಣ್ಣವರ್ ಮಣ್ಣವರ್
ವಿರುಂಬು ವೆರ್ಪು

-ರಹಸ್ಯತ್ರಯಸಾರ
(ಸ್ಥಾನವಿಶೇಷಾಧಿಕಾರ)

'ವೆಂಕಟ' ಎಂದರೆ ಪಾಪನಾಶ ಎಂದು ಪೊಯ್ಗೈ ಮುನಿ ಸ್ಪಷ್ಟಪಡಿಸುವರು (1 ತಿರುವಂದಾದಿ) ತಂಪಾದ ವೆಂಕಟಾದ್ರಿ ಎಂದು ಅನೇಕವಾಗಿ ಹೇಳಲ್ಪಟ್ಟಿದೆ ಇಲ್ಲಿ ವಾಸಿಸುವ ಭಕ್ತರು ನಿತ್ಯಕೈಂಕರ್ಯ ಪರರಾಗಿರುವುದಿಲ್ಲದೆ ನಿತ್ಯ ಸೂರಿಗಳಂತೆ ಬೆಳಗುವರು

೧ ನತೇ ಮನುಷ್ಯೇ ದೇವಾಸ್ತೇ - ಶ್ರುತಿ.

೨ ವೇಂಗಡಂ ನೀಣಿಲತ್ತುಳ್ಳದು ಶೆನ್ರು ವರ್ಗಳ್ಕೈಕೈತೊಳುವಾರ್‌ಗಳೇ (ಪೆ ತಿ 9-3-8)

ಅವನ ನೆಲೆಯಿಂದ ಇದೇ ಭೂವೈಕುಂಠವಾಗಿರುವಾಗ ಇನ್ನು ಬೇರೆ ಪರಮ ಪದದ ಮಾತೇಕೆ ಎಂದು ಕಲಿಯವರು ದಿವ್ಯ ದೇಶವನ್ನು ಶ್ಲಾಘಿಸುವರು ಸಪ್ತಗಿರಿ ಎಂಬ ಮೂಲಧನ ಈ ಕಲಿಯುಗದಲ್ಲಿ ಕೇಳಿದ್ದನ್ನು ಕೊಡುವ ಕಾಮಧೇನುವಾಗಿದೆ

ಎ) ಮೂಲಸುನ್ನ ಧನಮು - ಅನ್ನಮಯ್ಯರ ಅದಿವೊ ಅಲ್ಲದಿವೋ ಪದ್ಯದಲ್ಲಿ

ಬಿ) ನೀವೀ - ದಯಾಶತಕ ೧೦೪

ಪುರಾಣ ಕಥೆಗಳ ಹಿನ್ನೆಲೆಯಲ್ಲಿ ಈ ದಿವ್ಯದೇಶಕ್ಕೆ ಶೇಷಶೈಲ, ಗರುಡಾಚಲ, ವೆಂಕಟಾದ್ರಿ, ನಾರಾಯಣಾದ್ರಿ, ವೃಷಭಾದ್ರಿ ಎಂದು ಹೆಸರುಗಳಿವೆ ವೆಂಕಟಾಚಲ ಮಹಾತ್ಮೆಯಲ್ಲಿ ಧರ್ಮಗಿರಿ ಎಂದು ಹೇಳಿರುವುದು 'ವೃಷಗಿರಿ' ಎಂದು ಕರೆಯಲ್ಪಟ್ಟಿದೆ. ಯುಗಯುಗಗಳಲ್ಲಿ ಈ ಹೆಸರುಗಳಿತ್ತೆಂದೂ, ಸಪ್ತಗಿರಿಯ ಏಳು ಹೆಸರುಗಳಿವು ಎಂದೂ ಹೇಳಲ್ಪಟ್ಟಿದೆ ಅವನ ನೆಲೆಯಿಂದ ಎ) ಪರಿಸರದ ಒಂದೊಂದು ಕಣಕ್ಕೂ ಮಹಿಮೆ ಉಂಟಾಗಿ ಅವುಗಳೂ ಪಾಪನಾಶಿನಿಯಾಗಿವೆ ಆದ್ದರಿಂದ ಮನುಷ್ಯರಲ್ಲದೇ ಪ್ರಾಣಿಗಳೂ ಅಲ್ಲಿ ವಾಸಿಸಲು ಇಚ್ಛೆಸುತ್ತವಂತೆ (ದಶತಕ - ೬೯), ಬಿ) ಬ್ರಹ್ಮಾದಿದೇವತೆಗಳು ನಾಮುಂದು ತಾಮುಂದು ಎಂದು ಸೇವೆಗಾಗಿ ಬಾಗಿಲಲಿ ನಿಂತಿರುವಂತೆ ಸುಪ್ರಭಾತದ ಪ್ರಮುಖ ವಿಷಯವೇ ಇದಾಗಿರುತ್ತೆ ಇದು ಭಗವನ್ಮಹಿಮೆಯನ್ನೇ ತೋರಿಸುವುದು ಇದರಿಂದ ಶ್ರೀ ವೈಷ್ಣವಕೋಟಿಯೇ ಪ್ರಭಾವಿತವಾಗಿದೆ ಶ್ರೀ ವೈಷ್ಣವಾಸ್ಸತತ ಮರ್ಧಿತ ಮಂಗಳಾಸ್ತೇ - ವೆಂಕಟೇಶ್ವರ ಸುಪ್ರಭಾತ

ಶ್ರೀನಿವಾಸನೇ ಆದಿಮೂರ್ತಿ ಸೃಷ್ಟಿಯ ಆದಿಯಲ್ಲಿ ಏಕವಾಗಿದ್ದು, ಏಕರೂಪನಾಗಿದ್ದು, ಏಕ ನಾಮ ಉಳ್ಳವನಾಗಿ ಅನಂತರ ಅನೇಕವಾಗಿ, ಅನೇಕ ರೂಪನಾಗಿ ಅನಂತ ನಾಮ ಉಳ್ಳವನಾಗಿ ಇಂದು ಇಲ್ಲಿ ದಿವ್ಯ ಮಂಗಳ ವಿಗ್ರಹ ಯುಕ್ತನಾಗಿ ನೆಲೆಸಿದ್ದಾನೆ ಏಕಮೂರ್ತಿ, ಇರು ಮೂರ್ತಿ, ಮೂನ್ರು ಮೂರ್ತಿ, ಪಲಮೂರ್ತಿಯಾಯ್ ಎಂದು ಮಾರನ್ ಸಾಮ್ಯಕೊಡುವರು ಶ್ರೀನಿವಾಸನ ಕಲ್ಯಾಣಗುಣಗಳು ಪ್ರಕಾಶಿಸುವುದು ಅರ್ಚೆಯಲ್ಲೇ ಅವನ ಮಹಿಮೆ ಮಹಾಸಾಗರವಿದ್ದಂತೆ.

ಇಡೀ ಸಪ್ತಗಿರಿ ಪ್ರದೇಶವು ಮೇರುಪರ್ವತದಂತಿದೆ ಎಂದು ಅಭಿಪ್ರಾಯವಿದೆ ಹರಿವಂಶದ ಶೇಷಧರ್ಮದ ಉಪಪರ್ವ ೪೮ನೇ ಅಧ್ಯಾಯದಲ್ಲಿ ಬರುವ 'ವೆಂಕಟಾಚಲ ಮಹಾತ್ಮೆಯಲ್ಲಿ' (ಭೀಷ್ಮ - ಯುಧಿಷ್ಠಿರ - ನಾರದ ಸಂವಾದ ರೂಪದಲ್ಲಿ) ವೆಂಕಟಾದ್ರಿಯಲ್ಲಿ ನೆಲೆಸುವ ಭಗವಂತನ ಸಂಕಲ್ಪವನ್ನೂ, ಇದನ್ನು ತಿಳಿದ ದೇವತೆಗಳು ಋಷಿಗಳು ಗುಂಪು ಗುಂಪಾಗಿ ಧರೆಗಿಳಿದು ಸಪ್ತಗಿರಿಗೆ ಧಾವಿಸಿದರು ಎಂದೂ, ಅವನ ನೆಲೆ (ನಿಂತಿರುವುದೇ) ಮೇರು ಪರ್ವತದಂತಿದೆ, ಸರ್ವರಿಗೂ ಶ್ರೀನಿವಾಸನು ಜ್ವಲಿಸುವ ಮೇರುಪರ್ವತದಂತೆ ಕಂಡನು ಎಂದೂ ವಿವರಣೆ ಇದೆ

ಎ) ಮೇರು ಮಂದರ ಸನ್ನಿಭಂ - ೧೩

ಬಿ) ಮೇರು ಮಂದರ ಸಂಕಾಶೈರ್ಜಾಂಬೂನದ ಪರಿಷ್ಕೃತೈಃ - ೨೦

ದೇವತೆಗಳು ಆ ಸಂತೋಷದ ಭರದಲ್ಲಿ ಕೆಲವರು ಏನೂ ತೋಚದೆ ನಿಂತರು, ಕೆಲವರು ಸಾಷ್ಟಾಂಗ ನಮಸ್ಕರಿಸಿದರು ಕೆಲವರು ಅಭಿಷೇಕಮಾಡಲು ಸಿದ್ಧರಾದರು ಮೇರುವಿನಂತಿರುವ ಆ ಬೃಹದಾಕಾರವನ್ನು ಶ್ರೀನಿವಾಸನು ಕಿರಿದು ಮಾಡಿಕೊಂಡನು

ನತೇರೂಪಂ ನಚಾ ಕಾರ
ನಾಯುದಾನಿ ನಚಾಸ್ಪದಂ
ತಥಾಪಿ ಪುರುಷಾಕಾರ
ಭಕ್ತಾನಾಂ ತ್ವಂಪ್ರಕಾಶಸೇ

ಎಂದು ಜಿತಂತೇಸ್ತೋತ್ರದಲ್ಲಿ ಹೇಳಿರುವಂತೆ ಭಕ್ತರ ಅಭಿಷ್ಟದಂತೆ ಶ್ರೀನಿವಾಸನು ದಿವ್ಯಮಂಗಳ ವಿಗ್ರಹವನ್ನು ಧರಿಸಿ ಇಲ್ಲಿ ಶೋಭಿಸುತ್ತಿದ್ದಾನೆ (ದಯಾಶತಕ ೨೨) ಪರ್ವತ ಎಂದರೆ ವೆಂಕಟಾಚಲವೇ - ವೆರ್ಪೆನ್ನು ವೇಂಗಡಂ (ಭಕ್ತಿಸಾರರು) ಇದೊಂದು ದಿವ್ಯದೇಶ - ಶುಭಾಲಯಾ (ದಶ ೭೩) ಇಂಥಾ ಪರ್ವತವನ್ನು ಸುಭಗಶ್ಚಿತ್ರ ಕೂಟೋ ಗಿರಿರಾಜೋಪಮೋ - ಎಂಬ ವಾಲ್ಮೀಕಿಯ ವಾಣಿಯಂತೆ ದೂರದಿಂದಲೇ ದರ್ಶನ ಮಾಡಿದರೆ ಸಾಕು ಫಲಕಾರಿ ಎಂಬ ಲೋಕೋಕ್ತಿಯೂ ಇದೆ ಶ್ರೀನಿವಾಸನೇ ಪರಬ್ರಹ್ಮ ಶಿವ, ಸೂರ್ಯ ಇಂದ್ರಾದಿ ಯಮ ಕುಬೇರ - ವಸು - ದಸ್ರೌ ವಿರಂಚಿ ಕೋಟಿ ಗಣದೇವತಾಶ್ಚ (ವೆಂ ಚ ಮಹಾತ್ಮೆ - ೨೩) ದೇವತೆಗಳಿಗೆ ಜನಕನು, ನಮ್ಮೆಲ್ಲರಿಗೂ ತಂದೆತಾಯಿ, ಮಹಾತ್ಮನಾಗಿದ್ದಾನೆ ಪಿತಾಪಿತೃಣಾಂ ಜನಕಸ್ಸುರಾಣಾಂ ಮಹತಾಂ ಮಹಾತ್ಮಃ (ವೆಂ ಚ ಮ ೨೪)

ಜಗ[illegible] ವೆಂ ಚ ಮ ೨೯) [illegible] ತಂದ ಎನ್ನುತಾರಮೇ (ಪೆತಿ ೧-೯-೧) ತಂದ ತಾಯಿ ಬಂಧು ಬಳಗ ಸರ್ವವಿಧ ಬಂಧುವು ನೀನೇ ಪುರಂದರವಿಠಲ ಶ್ರೀನಿವಾಸನು ದೀನದಲಿತರ ಬಂಧು, ಬೇರೆ ದೈವಗಳಲ್ಲಿ ಈ ಸೌಲಭ್ಯವಿಲ್ಲ ಎಂಬ ನಾಣ್ನುಡಿ ಇದೆ ಕೃಪಣ ಜನ ಕಲ್ಪಲತಿಕಾಂ - (ದಯಾಶತಕ ೧೪) ದೀನ ಬಂಧು ಶ್ರೀನಿವಾಸ ನಾ ನಿನ್ನ ಸೇವಕ ನೀನೇ ಗತಿ ಎನಗೆ (ಶ್ರೀ ಪಾದರಾಜರು) ವೆಂಕಟೇಶನ ಸ್ಮರಣೆ ಮಾತ್ರದಿಂದಲೇ ಪಾಪ ನಶಿಸುವುದು ಅವನ ದಯೆ ಸಂಸಾರ ಸಾಗರವನ್ನು ದಾಟುವ ಸೇತುವೆ ಮತ್ತು ನೌಕೆಯೂ ಆಗಿದೆ

ಎ) ಯಸ್ಯ ಸ್ಮರಣ ಮಾತ್ರೇಣ ನರಪಾಪ್ಯೈ ಪ್ರಮುಚ್ಯತೇ (ವೆಂ ಚ ಮ ೨೭)

ಬಿ) ಸಂಸಾರ ಸಾಗರ ಮುತ್ತರಣೈಕ ಸೇತೋ - (ವೆಂ ಸುಪ್ರಭಾತ)

ಸಿ) ಅಖಿಲ ಧರ್ಮಸೇತು ಸಂಸಾರತಾರಿಣಿ (ದಯಾ ಶತಕ ೫೧)

ಭೂಲೋಕದಲ್ಲಿರುವ ಎಲ್ಲಾ ತೀರ್ಥ ಕ್ಷೇತ್ರಗಳು ಪುಣ್ಯಕ್ಷೇತ್ರಗಳು ಇವನ ನೆಲೆಯಿಂದ ಪವಿತ್ರವಾಗಿ ಇವನನ್ನೇ ಸೇವಿಸುವವಂತೆ

ಯಾನಿ ಕ್ಷೇತ್ರಾಣಿ ಪುಣ್ಯಾನಿ
ತೀರ್ಥಾನ್ಯಾಯ ತನಾನಿ ಚ
ತಾನಿ ಸರ್ವಾಣಿ ಸೇವನ್ತೇ
ಶ್ರೀನಿವಾಸ ಜಗನ್ಮಯಂ (ವೆಂ ಚ ಮ ೨೯)

ಈ ದಿಸೆಯಲ್ಲಿ ದಿವ್ಯದೇಶಗಳನ್ನು ೧೦೮ ತಿರುಪತಿಗಳೆಂದು ಕರೆದಿರುವುದು ಇಲ್ಲಿ ಗಮನಾರ್ಹ ತಿರು + ಪತಿ ಎಂದರೆ ಶ್ರೇಷ್ಠವಾದ ನೆಲೆ ಎಂದೂ ಅರ್ಥೈಸಲಾಗಿದೆ

ಇಡಿ ಕ್ಷೇತ್ರಕ್ಕೇ ಮಂಗಳಾಭರಣವಾಗಿರುವ ಆ ಪಾದದ್ವಯ ಇನ್ನೂ ಹೆಚ್ಚು ಮಹಿಮೆ ಉಳ್ಳದು ಅವು ನಮ್ಮ ಮೇಲೆ, ಕಾಳಿಂಗನ ಮೇಲೆ, ಶ್ರುತಿಗಳ ಶಿರಸಿನಲ್ಲಿ ವ್ಯಾಪಿಸಿದೆ (ವೆಂ ಪ್ರಪತ್ತಿ ೧೨) ಆ ಪಾದಗಳಿಂದಲ್ಲವೇ ದಯೆ ಉದ್ಭವಿಸಿ ನಯನ



ಮುತ್ತಿನ ಕಿರೀಟ ಧರಿಸಿದ ಸ್ವಾಮಿ

ದಲ್ಲಿ ಕೇಂದ್ರೀಕರಿಸಿರುವುದು ? (ದ.ಶ. - ೧೯) ಶ್ರುತಿಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ ಎಂದು ಯತಿರಾಜರು ಶ್ರೀನಿವಾಸನ ಪಾದಮಹಿಮೆಯನ್ನು ಹೇಳಿರುತ್ತಾರೆ (ಶ್ರೀ ಭಾಷ್ಯದ ಮಂಗಳ ಶ್ಲೋಕ) ಶ್ರೀನಿವಾಸನ ಬಲಹಸ್ತವು 'ನನ್ನ ಪಾದಗಳನ್ನು ಆಶ್ರಯಿಸಿ' ಎಂದು ಹೇಳುವಂತಿದೆ. ಎಂದೆಂದಿಗೂ ಬಾಡದ ಹೂವಿನಂತಿರುವ ಆ ಪಾದಗಳು ಶಂಖ ಚಕ್ರಾದಿ ರೇಖೆಗಳಿಂದ ಕೂಡಿ ನಿತ್ಯ ನೂತನವಾಗಿವೆ ಕೋಮಲವಾಗಿಯೂ ರಮಣೀಯವಾಗಿಯೂ ಇವೆ

ಎ) ರೇಖಾಮಯಧ್ವಜ........ .......ಶಂಖಚಕ್ರೈ (ವೆಂ ಪ್ರಪತ್ತಿ)

ಬಿ) ಕದಾ ಪುನಶ್ಶಂಖರಥಾಂಗ.......... ವಜ್ರಲಾಂಛನಮ್(ಯಾಮುನರ ಸ್ತೋತ್ರ ರತ್ನ)

ಸಿ) ಅಮ್ಲಾನಹೃಷ್ಯದವನೀತಲಕೀರ್ಣ ಪುಷ್ಪಾ (ವೆಂ. ಪ್ರಪತ್ತಿ)

ನೂತನವಾಗಿ ಕಾಣುವ ಪಾದಗಳು ಎಂದು ಹೇಳುವಲ್ಲಿ ಶ್ರೀನಿವಾಸನು ನಿತ್ಯಯುವಕನು ಎಂದು ಹೇಳಿದಂತಾಯ್ತು. 'ಎನ್ ಮೈಂದಾ' ಎಂದು ಮಾರನ್ ಸಂಬೋಧಿಸುವರು 'ಆ ಪಾದದಿಂದಲ್ಲವೇ ಹಿಂದೆ ತ್ರಿವಿಕ್ರಮನಾಗಿ ಲೋಕವನ್ನಳೆದದ್ದು' ಎನ್ನುವರು ದೇಶಿಕರು (ದ.ಶ.85)

ಶ್ರೀನಿವಾಸನೇ ದಶಾವತಾರಿ ಎಂದು ಅನೇಕ ಸ್ತೋತ್ರಗಳಲ್ಲಿ ಹೇಳಿದೆ.

೧) ಮಾನಾಕೃತೇ ಕಮಠ ಕೋಲ ನೃಸಿಂಹ ವರ್ಣಿನ್ - ವೆಂ ಸುಪ್ರಭಾತ

೨) ದಯಾಶತಕದ ೮೨ ರಿಂದ ೯೦ ನೇ ಪದ್ಯದವರಿಗೂ ೯ ಅವತಾರಗಳ ವರ್ಣನೆ.

೩) ವೇದ ಗೋಚರಬಾರೊ ಆದಿಕಚ್ಛಪ ಬಾರೋ ...... ಸ್ವಾಮಿ ಕಲ್ಕಿ ಬಾರೋ ಪುರಂದರ ವಿಠಲ

೪) ವಿಜಯದಾಸರ ನಿಂದಾಸ್ತುತಿಯಲ್ಲಿ ೧೦ ಅವತಾರಗಳು

೫) ದಿವ್ಯಪ್ರಬಂಧದಲ್ಲಿ ಹೆಚ್ಚಾಗಿ ವಾಮನ ತ್ರಿವಿಕ್ರಮ, ರಾಮ ಕೃಷ್ಣಾವತಾರಗಳು

ಈ ಎಲ್ಲ ಅವತಾರಗಳಲ್ಲಿ ಅವನ ಭಾರ್ಯೆಯರು ಅವನ ಜೊತೆಜೊತೆಯಲ್ಲಿ ಸಹಕರಿಸುವರು ಪದ್ಮಾಸಹಾಯಕರುಣೆ - ದಶ - ೧೭.

ಶ್ರೀನಿವಾಸನಿಗೆ ಕೃಷ್ಣಾತ್ಮಕತ್ವವಿದೆ ಎಂಬ ಸಂಪ್ರದಾಯದ ಮಾತಿದೆ. ಶ್ರೀಕೃಷ್ಣನೇ ಶ್ರೀನಿವಾಸನ ರೂಪವನ್ನು ತಾಳಿರುವನು ಎಂದು ಅನಂತ ಹೇಳಲ್ಪಟ್ಟಿದೆ.

೧ ಕಣ್ಣನಡಿಯಿಣೈ ಎಮಕುಕಾಟ್ಟುಮ್ ವೇರ್ಪು - ರಹಸ್ಯತ್ರಯಸಾರ

೨ ವಸುದೇವ ಸುತಾನ್ನ ಪರಂಕಲಯೇ - ವೆಂಕಟೇಶಸ್ತೋತ್ರ.

೩. ಚೇರಿ ಯಶೋದಕು ಶಿಶುವಿತಡು - ಅನ್ನಮಾಚಾರ್ಯ

೪ ತಿರು ವೆಂಗಡತ್ತು ಆಯನ್ - ತಿರುವಾಯ್‌ಮೊಳಿ ೩-೩-೯

೫. ಅಂದು ಗೋವರ್ಧನವನ್ನು ಎತ್ತಿ ಹಿಡಿದವನೇ ಇಲ್ಲಿದ್ದಾನೆ ಪೆ.ತಿ 1-8-9

೬. ಇದು ವೇಣುಗೋಪಾಲನು ಗಾನ ಮಾಡಿದ ದಿವ್ಯದೇಶ - 3 ನೇ ತಿರುವಂದಾದಿ ೨೮

೭. ಅಜ್ಞಾನಾಂಧಕಾರವನ್ನು ಹೋಗಲಾಡಿಸಲು ಅಂದು ಗೀತಾಚಾರ್ಯನಾದವನೇ ಇಂದು ಇಲ್ಲಿ ಶ್ರೀನಿವಾಸನಾಗಿದ್ದಾನೆ - ಜಗತಿ ಗೀತಯಾಂಧುತಮಃ ದ.ಶ ೪೯

೮ ಪಾರ್ಥಾಯ ತತ್ಸದೃಶ ಸಾರಥಿನಾ ತ್ವಯೈವ - ವೆಂಕಟೇಶ ಪ್ರಪತ್ತಿ.

೯. ವೈಖಾನಸ ಆಗಮದಲ್ಲಿಯೂ ಹೀಗೆಯೇ ಹೇಳಿದೆ.

೧೦ ಮಾಮೇಕಂ ಶರಣಂ ವ್ರಜ - ಎಂಬ ಉಪದೇಶಕ್ಕೆ ವಿಷಯವಾಗಿರುವ ಶ್ರೀನಿವಾಸನ ಬಲಹಸ್ತ ಹಾಗೂ ಪಾದಗಳು ಈ ಭಾವನೆಗೆ ಇನ್ನಷ್ಟು ಪುಷ್ಟಿಕೊಟ್ಟಿವೆ. ಸಿದ್ಧಾಂತಗಳಲ್ಲಿ ವರಾಹ, ಶ್ರೀನಿವಾಸ ನೃಸಿಂಹ ಬೇರೆ ಬೇರೆಯಲ್ಲ ಆದರೆ ಸ್ಥಳ ಮಹಾತ್ಮೆಯಲ್ಲಿ ಬೇರೆ ಬೇರೆ ಆದರೂ ದಿವ್ಯಪ್ರಬಂಧದಲ್ಲಿ ಶ್ರೀನಿವಾಸನನ್ನು ಅನೇಕ ಅರ್ಚಾಮೂರ್ತಿಗಳಿಗೆ ಸಮೀಕರಿಸಲಾಗಿದೆ ಉದಾ ಶ್ರೀನಿವಾಸನೇ ಶ್ರೀರಂಗದಲ್ಲಿಯೂ ಇರುವನು ನಿನ ಪ್ಪರಿಯ ನೀಳ್ ಅರಂಗತ್ತುಳ್ಳಾನ್ - 2ನೇ ತಿರುವಂದಾದಿ ೨೮.

ದಿವ್ಯನಾಮಾವಳಿಯಲ್ಲಿ ಕೃಷ್ಣನನ್ನು ಕುರಿತ 'ಗೋವಿಂದ' ನಾಮವೇ ಶ್ರೀನಿವಾಸನಿಗೆ ಹಿತವಾದುದು ಉತ್ತಿಷ್ಠೋತ್ತಿಷ್ಠ ಗೋವಿಂದ ಎಂದು ಸುಪ್ರಭಾತದಲ್ಲಿ, ದಾಸಸಾಹಿತ್ಯದಲ್ಲಿ ದಿವ್ಯಪ್ರಬಂಧಗಳಲ್ಲಿ ಅನ್ನಮಯ್ಯ ಸಂಕೀರ್ತನೆಗಳಲ್ಲಿ ಈ ದಿವ್ಯನಾಮ ವ್ಯಾಪಿಸಿದೆ ಶ್ರೀನಿವಾಸನು ವರಾಹದೇವರ ಆಶ್ರಯ ಕೋರಿದ್ದ ಹಿನ್ನೆಲೆಯಲ್ಲಿ ವಾದಿರಾಜರು ವರಾಹ ತಿಮ್ಮಪ್ಪ ಎಂದು, ಅನ್ನಮಾಚಾರ್ಯರು ವೆಂಕಟನರಸಿಂಹ ಎಂದು ಒಂದು ಬಾರಿ ಹೇಳಿರುತ್ತಾರೆ ಭಕ್ತಿಯ ಆವೇಶದಲ್ಲಿ ದಾಸರುಗಳು ಕಳ್ಳದೊರೆ, ಗೋವಿಂದಸೆಟ್ಟಿ ಲೋಭಿ ಮುಂತಾದ ಹೆಸರುಗಳನ್ನು ನಿಂದಾಸ್ತುತಿಯಲ್ಲಿ ಹೇಳಿರುತ್ತಾರೆ

## ದಯಾಗುಣದ ಅತಿಶಯ :

(ದಯಾಶತಕ ಆಧಾರಿತ)

೧ ಪಾಮರನೊಬ್ಬ ವ್ಯಾಪಾರದ ಸಲುವಾಗಿ ಈ ದಿವ್ಯದೇಶಕ್ಕೆ ಬರುವನು ವ್ಯಾಪಾರ ಕುದುರ ಬೇಕಾದರೆ ೩-೪ ಗಂಟೆಗಳಾಗಬಹುದು ಅಲ್ಲಿಯವರೆಗೆ? ಇಂತಹವನ ಮನಸ್ಸಿನಲ್ಲಿ ಶ್ರೀನಿವಾಸನೇ ಕರುಣೆಯಿಂದ 'ಸುಮ್ಮನೆ ಕಾಲಹರಣವೇಕೆ? ಸೇವೆ ಮಾಡು' ಎಂದು ಪ್ರೇರಣೆ ಮಾಡಿದಾಗ ಅವನಿಗೆ ಯಾದೃಚ್ಛಿಕವಾಗಿ ದರ್ಶನ ಪ್ರಾಪ್ತವಾಗುವುದು ಕೆಚ್ಚಲು ಭಾರದಿಂದ ಹೇಗೆ ಹಸುವು ತಾನಾಗಿಯೇ ಹಾಲು ಕೊಡುವುದೋ ಹಾಗೆಯೇ ಇಲ್ಲಿ ಶ್ರೀನಿವಾಸನ ದಯೆ ಪ್ರವಹಿಸುವುದು ಕರುಣೀತ್ವನ್ನಿ ದಾನಾತ್ ದೈವಾತ್ ವೃಷಗಿರಿ ತಟಂ ದೇಹಿನಿ ಪ್ರಾಪ್ತೇ - ದಯಾ ಶತಕ ೪೮

೨ ಶ್ರೀನಿವಾಸನ ದಯೆ ನಮ್ಮ ಮೇಲೆ ಬಿದ್ದಲ್ಲಿ ನಾವು ಪೂರ್ವಾರ್ಜಿತ ಕರ್ಮಗಳನ್ನು ಋಣತ್ರಯವನ್ನು ಕಳೆದುಕೊಂಡು ಭಾಗ್ಯಶಾಲಿಗಳಾಗುವೆವು - ೪೯

೩ ಯಾರಲ್ಲಿ ಅಪರಾಧಗಳು ಹೆಚ್ಚಾಗಿರುವುದೋ ಅವರು ಭೀತಿಯಿಂದ ದಯಾ



ವಸಂತೋತ್ಸವದಲ್ಲಿ ಸ್ವಾಮಿ.

ದೇವಿಯನ್ನು ಎದುರು ನೋಡುವರು. ಅಂಥಾವರು ಶರಣಾಗುವುದನ್ನು ದಯಾ ದೇವಿ ಎದುರು ನೋಡುವಳು ಕ್ಷುದ್ರ ಫಲ ಪ್ರವಣರಿಗೂ ಭಕ್ತಿಯನ್ನುಂಟು ಮಾಡಿ ಯಾವುದಾದರೊಂದು ನೆಪದಿಂದ ಅವರನ್ನು ಉದ್ಧರಿಸುವಳು ಅವಿದ್ಯಾಖ್ಯ ಬಡಬಾಂ ಶಮಯಿತು ಲಪ್ರಭವಸಿ - ೬೧

೪ ಪಕ್ಷಪಾತವಿಲ್ಲದೇ ಮಳೆಹೇಗೆ ಎಲ್ಲರಮೇಲೂ ಸುರಿಯುವುದೋ ಹಾಗೆಯೇ ದಯಾವರ್ಷ ಆಶ್ರಿತ ಅನಾಶ್ರಿತರೆಂಬ ಭೇದ ಭಾವವನ್ನು ನೋಡುವುದಿಲ್ಲ

೫ ನಿಗ್ರಹಾನುಗ್ರಹಗಳೆರಡೂ ದಯಾ ಕಾರ್ಯ ಮಕ್ಕಳು ಮಾಡಿದ ದುಷ್ಕೃತಗಳನ್ನು ಕ್ಷಮಿಸುವಳು ಇಂಥಾ ಪಾಪಪರಿಹಾರಕ ಸಿದ್ಧೌಷದಿ ಅಂಜನಾದ್ರಿಯಲ್ಲಿದೆ - ೧೨.

೬. ಶ್ರೀನಿವಾಸನದಯೆ ವೆಂಕಟಾದ್ರಿಯ ರೂಪವನ್ನು ಹೊಂದಿದೆ. ಕಲ್ಲು ಸಕ್ಕರೆಯಂತೆ ಹೆಪ್ಪುಗಟ್ಟಿದೆ. ಅದನ್ನು ಸೇವಿಸಿದರೆ ದಯಾದೇವಿಯನ್ನು ಶರಣು ಹೋದಂತೆ. ಒಂದು ವೇಳೆ ಶರಣಾದಮೇಲೂ ತಪ್ಪು ಮಾಡಿದರೆ ದಯಾಮಾತೆ ಅವರಿಗೆ ಲಘು ದಂಡನೆಯನ್ನು ವಿಧಿಸುವಳು.

೭. ಶ್ರೀನಿವಾಸನ ಗುಣ ಸಮೂಹದಲ್ಲಿ ದಯಾಗುಣವೇ ಗುರುತರವಾದುದು ಇದು ಇತರ ಗುಣಗಳನ್ನು ಅನುಚರರಾಗಿ

ಕಿಂಕರರಾಗಿ ಹಿಂದಿಕ್ಕುವುದು ದಯೆ ರಹಿತವಾಗಿ ನಮ್ಮ ಹತ್ತಿರ ಭಗವದ್ಗುಣಗಳು ಬರುತ್ತಿರಲಿಲ್ಲ ಇವಳಿಲ್ಲದೆ ಷಡ್ಗುಣಗಳೂ ದೋಷವಾಗಬಹುದು ಈ ದಯಾಗುಣ ಮಹಿಮೆಯಿಂದಲೇ ಶ್ರೀನಿವಾಸನು ಯಶಸ್ವಿಯಾಗಿದ್ದಾನೆ, ಅವನ ವಾಸಸ್ಥಳವು ಕ್ರೀಡಾ ಶೈಲವೂ ವಿಜಯಸ್ಥಾನವೂ ಆಗಿದೆ

೮ ಶ್ರೀನಿವಾಸನು ದಯಾದೇವಿಗೆ ವಶವಾಗಿರುತ್ತಾನೆ ಅಂದರೆ ಸದಾಕಾಲವೂ ಶ್ರೀಶನು ದಯೆ ಉಳ್ಳವನಾಗಿರುತ್ತಾನೆ ಇದು ಅವನ ಸ್ವಾಭಾವಿಕ ಗುಣ ತಾರಾಮೈತ್ರಿ - ೨೦ ಅಕಸ್ಮಾತ್ ಕೋಪಗೊಂಡಾಗ ಸಮುದ್ರ ತಳದಂತೆ ಶೀತಲವಾಗಿರುವ ದಯಾದೇವಿ ಆ ಕೋಪವನ್ನು ಶಮನಮಾಡುವಳು

೯ ದಯಾ ಪ್ರವಾಹವು ವೆಂಕಟನನ್ನೇ ಮೀರಿ ಹರಿದು ಎಲ್ಲರೂ ಏಕೆ ಶ್ರೀನಿವಾಸನನ್ನೆ ವಿಸ್ಮಯಗೊಳಿಸುವುದಂತೆ! ಇವನ ಸ್ವರೂಪಕ್ಕಿಂತ ನಾಲ್ಕರಷ್ಟು ದೊಡ್ಡದಾದದ್ದು ದಯಾಸ್ವರೂಪ ಸ್ವರೂಪದ್ವೈಗುಣ್ಯ ನಿಜ ಬಿಂದು - ೬೧

೧೦ ಶ್ರೀಶನು ಅಪರಾಧಿಗಳನ್ನು ಶಿಕ್ಷಿಸುವ ನ್ಯಾಯಾದೀಶನಾದರೆ, ದಯಾದೇವಿ ಅಪರಾಧಿಯ ಪರವಾಗಿ ವಾದಿಸಿ ತೀರ್ಪನ್ನು ತಿರುಗಿಸುವ ವಕೀಲಳಾಗಿದ್ದಾಳೆ

೧೧ ಬ್ರಹ್ಮಾದಿಗಳ ಪದವಿಗಳು ಪ್ರಾಪ್ತವಾಗದೇಕಾದರೆ ಹಾಗೂ ಅವುಗಳ ಯಶಸ್ಸಿಗೆ ಭಗವದ್ದಯೆಯೇ ಕಾರಣ - ದ ಶ ೫೩ ಮತ್ತು ೬೭

## ತತ್ವ ವಿಚಾರಗಳು :

ದಯಾಶತಕದ ಪ್ರಥಮ ಶ್ಲೋಕದಲ್ಲೇ 'ಪ್ರಪದ್ಯೇ' ಎಂದು ದೇಶಿಕರು ಶರಣಾಗತಿಯನ್ನು ಸೂಚಿಸಿದ್ದಾರೆ ಶರಣಾಗತವತ್ಸಲ ಕರುಣಾಕರ ವೆಂಕಟೇಶ ಎಂದು ಗುರುಜಗನ್ನಾಥದಾಸರು, ಶರೀರವನ್ನು ನಿನ್ನ ಚರಣಕ್ಕೆ ಒಪ್ಪಿಸಿದೆನೋ ಎಂದು ಗೋಪಾಲದಾಸರು, ಪುರುಷೋತ್ತಮಾ ಮಮು ನಡಯಕವಯ್ಯ ಕೋನೇಟಿರಾಯ ಎಂದು ಅನ್ನಮಾಚಾರ್ಯರು ಶರಣಾಗತಿ ತತ್ವವನ್ನ ಎತ್ತಿ ಹಿಡಿದಿರುತ್ತಾರೆ

ಪ್ರಪನ್ನನು ದಯಾದೇವಿಯ (ಶ್ರೀನಿವಾಸನ) ಮೇಲೆ ಮಹಾ ವಿಶ್ವಾಸವನ್ನಿಟ್ಟಿರುತ್ತಾನ ಪಾಪಿಗಳು ಬದುಕಬೇಕಾದರೆ ಅವಳ ಕೃಪೆಯಿಂದಲೇ ಅವರು ದಯೆಯುವನು ರಾಮಾನುಜರೂ ಇದನ್ನೇ ಸ್ಪಷ್ಟಪಡಿಸುವರು ಇಲ್ಲಿ ದಯಾದೇವಿ ಆಚಾರ್ಯನ ಸ್ಥಾನ ದಲ್ಲಿರುತ್ತಾಳೆ ಕಲ್ಪವೃಕ್ಷವಾದ ಅವಳನ್ನು ಆಶ್ರಯಿಸಿದವರಿಗೆ ಫಲ.



ಚಿಕ್ಕ ಶೇಷವಾಹನದಲ್ಲಿ ಸ್ವಾಮಿ

ಯನ್ನೇ ಎದುರು ನೋಡುವರು ಒಮ್ಮೆ ದಯೆ ಪ್ರವಹಿಸಿದ ಮೇಲೆ ಪ್ರಪನ್ನನು ಮುಂದಿನ ಕೆಲವನ್ನು ನಿಶ್ಚಿಂತೆಯಿಂದ ಕಳೆ

ದೇಶಿಕರು ಶ್ರೀನಿವಾಸನಿಗೆ ಉನ್ನತವೂ ಪವಿತ್ರವೂ ಆದ ಆಚಾರ್ಯ ಸ್ಥಾನವನ್ನು ಕೊಟ್ಟು ಶ್ರೀನಿವಾಸನೇ ಗುರುಪರಂಪರೆ



ಸ್ವರ್ಣಾಲಂಕಾರದಲ್ಲಿ ಸಪ್ತಗಿರಿಸ್ವಾಮಿ

ಯಲ್ಲಿ ಪ್ರಪಮಾಚಾರ್ಯ ಎಂಮ ಹೇಳಿ ಅನಂತರ ಮಹಾಲಕ್ಷ್ಮಿ ವಿಶ್ವಕ್ಸೇನ, ಪರಾಶ ರಮಹರ್ಷಿ ಆಳ್ವಾರರುಗಳು ಈ ಪರಂಪರೆ ಯನ್ನು ಮುಂದುವರೆಸಿರುತ್ತಾರಂಮ ವರ್ಣಿ ಸಿರುತ್ತಾರೆ - ದಶ ೩ ರಿಂದ ೯ ಅವನ ಭಾರ್ಯೆಯರು ಭಗವಂತನ ವಿಭೂತಿಗಳು ಇಮ ಉಭಯ ವಿಭೂತಿ ತತ್ವವೇ. ಆಗಿದೆ

ವೆಂಕಟೇಶ ಪ್ರಪತ್ತಿಯಲ್ಲಿ ಬರುವ ಸ್ತೋತ್ರ ಗಳು ದ್ವಯ ಮಂತ್ರಾರ್ಥಗಳನ್ನು ಪ್ರತಿಪಾದಿಸಿ ಪ್ರಪತ್ತಿಗೆ ಜಾತಿಭೇದ, ವೇಳೆ ಸಮಯ ಗಳಿಲ್ಲ ಯಾರು ದೇಕಾದರೂ ಪ್ರಾಣಿಗಳೂ ಈ ಸರಳ ಉಪಾಯವನ್ನು ಮಾಡಬಹುದು ಎಂದು ಹೇಳಿದೆ 'ಸರ್ವಶೇಷಿನ್'ನಲ್ಲಿ ಶೇಷ - ಶೇಷಿ ಭಾವ ಇದೆ



ಅಶ್ವವಾಹನದಲ್ಲಿ ಸ್ವಾಮಿ

ಕಮಲಾಕುಚ ಚೂಚುಕ ಉಭಯ ದೇವಿಯರು ಅವನ ವಕ್ಷಸ್ಥಳದಲ್ಲಿರುವುದು ಅವರ ನಿತ್ಯಯೋಗವನ್ನೂ ಪುರುಷಕಾರತ್ವ ವನ್ನು ಸೂಚಿಸುವುದು ಶ್ರೀವತ್ಸ ವಕ್ಷಾ ಶ್ರೀವಾಸ ಶ್ರೀಮಾನ್ ಲೋಕತ್ರಯಾಶ್ರಯಃ - ಎಂಬುದಾಗಿ ಶ್ರೀನಿವಾಸನಿಗೆ ಹೇಳಿ ರುವಷ್ಟು ಶ್ರೀಶಬ್ದ ದೇರಾವುದರಲ್ಲಿಯೂ ಕಾಣಸಿಗದು ಹೀಗೆ ಲಕ್ಷ್ಮಿಪತಿತ್ವ ಹೇಳಿ ರುವುದರಿಂದಲೇ ಅವನು ತ್ರೈಲೋಕನಾಧ ನಾದನು ಅಲರ್‌ಮೇಲ್ ಮಂಗೈ ಉರೈ ಮಾರ್ಬಾ - ಎಂಬ ಮಾರನರಸ್ತುತಿಯೂ 'ಶ್ರೀಮತ್' ಶಬ್ದವನ್ನು ಸೂಚಿಸುವುದು

ಸುಪ್ರಭಾತಗಳಲ್ಲಿ ಉಕ್ತವಾಗಿರುವ ಬ್ರಹ್ಮಾದಿ ಸ್ತುತಿಗಳಿಂದಲೂ, ಶ್ರೀಮನ್ ಕೃಪಾಜಲನಿದೇ ಕೃತ ಸರ್ವಲೋಕ ಸರ್ವಜ್ಞ ಶಕ್ತ ಎಂದು ಹೇಳಿರುವುದರಿಂದಲೂ ಶ್ರೀಶನ ಸರ್ವೇಶ್ವರತ್ವ ಹಾಗೂ ಇತರ ಭೂಮಗುಣಗಳು ಪ್ರಕಟವಾಯಿತು

## ಪ್ರಾರ್ಥನೆ :

೧ ಎ) ದಯಾಮಾತೆಯೇ ನಾವು ಅಪರಾಧ ಚಕ್ರವರ್ತಿಗಳು ಪ್ರತಿಕ್ಷಣಕ್ಕೂ ಅಪರಾದ ಮಾಡುತ್ತಲೇ ಇರುವೆವು. ನೀನು ಕೃಪೆಮಾಡದಿದ್ದರೆ ನಾವು ಬದುಕುವುದೇ ಅಸಾಧ್ಯ ನಿನಗೆ ಅರ್ಪಿಸಲು ನಮ್ಮ ಅಪರಾಧಗಳನ್ನು ಬಿಟ್ಟರೆ ದೇರೇನು ಇಲ್ಲ ನಮ್ಮನ್ನು ದುಷ್ಟ ಜಂತುಗಳೆಂದು ಭಾವಿಸಿ ಬಲೆ ಬೀಸಿ ಸೆರೆಹಿಡಿದು ಕಟ್ಟಿಹಾಕು ದಶ ೯೫, ೯೭, ೯೯ ಬಿ) ಸೇವೆ ಮಾಡುವಾಗ ಅಜ್ಞಾನದಿಂದ ಮಾಡಿದ ತಪ್ಪನ್ನೂ ಕ್ಷಮಿಸು ಸ್ವಾಮಿ - ಅಜ್ಞಾನಿ ನಾ ಮಯಾದೋಷಾ ಸಿ) ಬಾಳ ಅಪರಾಧಿ ನಾನು ನಿನ್ನ ಬಳಿಗೆ ಬಂದಿಹೆನು ರಕ್ಷಿಸಯ್ಯ ಪುರಂದರವಿಠಲ ಡಿ) ಎನ್ನ ಕುಂದುಗಳನ್ನು ಎಣಿಸಲಾಗದೊ ದೇವಾ - ವಾದಿರಾಜರು ಇ) ಮೂರ್ಖ ವೃತ್ತಿಯಲ್ಲೇ ನಾನು ಆಯುಷ್ಯವನ್ನು ಕಳೆದೆ - ಪ್ರಸನ್ನ ವೆಂಕಟದಾಸರು

೨ ದೇವತಾಂತರಕ್ಕೆ ಮನಸ್ಸು ಹೋಗದಂತೆ ಪ್ರಾರ್ಥನೆ - ಎ) ಪರದೇವತಯಾ ಗದಿತಾನ್ನಿಗಮ್ಯೈ ಬಿ) ವಿನಾ ವೆಂಕಟೇಶಂ ಎಂದು ವೆಂಕಟೇಶನನ್ನು ಬಿಟ್ಟು ದೇರೆ ದೈವವಿಲ್ಲ ರಕ್ಷಕರಿಲ್ಲ ಎಂದು ಭಾವಿಸಿ



ಮುತ್ತಿನಚಪ್ಪರ ವಾಹನದಲ್ಲಿ ಸ್ವಾಮಿ.

ಕೊಂಡು 'ಏಳೇಳು ಜನ್ಮಗಳಲ್ಲಿಯೂ ನಿನ್ನ ಸೇವೆಯೇ ನಗಿರಲಿ' ಎಂದು ಪ್ರಾರ್ಥಿಸಿದ್ದಾರೆ ಗೋವಿಂದಾ ಎತ್ತೈಕು ಏಳೇಳು ಪಿರವಿಕ್ಕುಂ ಎಂದು ಆಂಡಾಳ್‌ನ ಪ್ರಾರ್ಥನೆ ಇಲ್ಲಿ ಉಲ್ಲೇಖಾರ್ಹ

೩. ೨೧ ಮತ್ತು ೩೭ ನೇ ಶ್ಲೋಕಗಳನ್ನು ದಿವ್ಯದೇಶ ವಾಸಿತ್ವಕ್ಕೆ ದೇಶಿಕರು ಪ್ರಾರ್ಥಿಸುವರು - ಎ) ಕೈಕಾಲು ಗಟ್ಟಿಯಾಗಿರುವಾಗಲೇ ಆದಷ್ಟು ಶ್ರೀನಿವಾಸನನ್ನು ಸೇವೆ ಮಾಡಬೇಕು 'ಯಾವುದಾದರೊಂದು ಕೀಳು ಜನ್ಮವಾಗಲಿ ಪರವಾಗಿಲ್ಲ' ಎಂದು ದಯಾದೇವಿಯಲ್ಲಿ ಪ್ರಾರ್ಥಿಸುವರು ಇಲ್ಲಿ ದೇಶಿಕರು ಕುಲ ಶೇಖರಾಳ್ವಾರರ ಅನುಭವವನ್ನು ಉಲ್ಲೇಖಿಸಿರುತ್ತಾರೆ

ಅಶಿಥಿಲ ಕರಣೇ ಅಕ್ಷತಶ್ವಾಸ
ವೃತ್ತಾಗಮನಯೋಗ್ಯೇ
ವೃಷಗಿರಿ ಕಟಕೇಶು
ವಾಸಂ ಅಸಾದಯೇಯಂ

## ಮಂಗಳಾಶಾಸನ :

ಭಕ್ತಿಯ ಆವೇಪದಲ್ಲಿ ವಿಷ್ಣುಚಿತ್ತರು ಭಗವಂತನು ಪ್ರಸನ್ನನಾಗಿದ್ದನ್ನು ಕಂಡು ವಿಸ್ಮಯವಾಗಿ 'ದೀರ್ಘಕಾಲ ಚೆನ್ನಾಗಿಬಾಳು' ಎಂದು ಆಶೀರ್ವದಿಸಿದರು ಅಂತೆಯೇ ಜಾಮಾತ್ರಮುನಿಯ ಶಿಷ್ಯರಲ್ಲೊಬ್ಬರು ವೆಂಕಟೇಶ ಸುಪ್ರಭಾತವನ್ನು ರಚಿಸಿ ಕೊನೆಯಲ್ಲಿ ವೆಂಕಟೇಶನಿಗೆ, ಅವನ ವಕ್ಷಃಸ್ಥಳದಲ್ಲಿರುವ ಭಾರ್ಯೆಯರಿಗೆ, ಅವನ ದಿವ್ಯಾವಯಗಳಿಗೆ, ಮನಮೋಹಕ ಸೌಂದರ್ಯಕ್ಕೆ ಅವನಲ್ಲಿರುವ ಎಲ್ಲಾ ಭಗವತ್ತತ್ವಗಳಿಗೆ ಮಂಗಳವಾಗಲಿ ಎಂದು ಸ್ತುತಿಸಿರುತ್ತಾರೆ ಎಷ್ಟು ನೋಡಿದರೂ ಇನ್ನೂ ನೋಡಬೇಕೆಂಬ ಆಸೆ ಉಂಟುಮಾಡುವ ಅಮೃತರೂಪನಾದವನಿಗೆ ಮಂಗಳ ಎ) ಸದಾಸಮ್ಮೋಹನಾಯಾಸ್ತು, ಬಿ) ಅತೃಪ್ತ್ಯಮೃತರೂಪಾಯ, ಸಿ) ಕಂದರ್ಪದರ್ಪಹರ ಸುಂದರ ದಿವ್ಯಮೂರ್ತೇ ಇಂದಿಗೂ ಸಪ್ತಗಿರಿಯಲ್ಲಿ ಹಿರಿಯ ಭಾಗವತರಿಗೆ ವಂದಿಸಿದಾಗ 'ಆದಷ್ಟು ಬೇಗ ಇನ್ನೊಮ್ಮೆ ದರ್ಶನವಾಗಲಿ' ಎಂದು ಹರಸುವರು

ದೇಶಿಕರ ತಮಿಳು 'ವೆಂಕಟೇಶ ಸುಪ್ರಭಾತದಲ್ಲಿ ತುಳಸಿ ಮಾಲೆಯನ್ನು ವಜ್ರಕಿರೀಟವನ್ನು ಧರಿಸಿರುವ ಮುಗುಳ್ನಗೆ ಉಳ್ಳವನೇ, ನೀಲಮೇಘನೇ ಚಂದ್ರಮುಖಿಯೇ ತಿರುವೆಂಗಡನಾಥನೇ ಬ್ರಹ್ಮಾದಿಗಳು ಸ್ತುತಿಸುತ್ತಾ, ವೈದಿಕೋತ್ತಮರು ವೇದಗಳನ್ನು ಪಠಿಸುತ್ತಾ ಬಾಗಿಲಲಿ ನಿಂತಿರುವರು ಏಳು ನಿನಗೆ ಶುಭ ಮಂಗಳ' ಎಂದು ಸ್ತುತಿಸಲ್ಪಟ್ಟಿದೆ



ಶ್ರೀನಿವಾಸನ ಸ್ವರ್ಣರಥ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ಆಂಗ್ಲ ಮೂಲ - ಡಾ|| ಎಸ್. ರಮೇಶನ್.

ಕನ್ನಡಾನುವಾದ - ಬಿ. ಎಸ್. ಶ್ರೀನಿವಾಸನ್.

ಮುಂದುವರೆದಿದೆ)

## ತುಳುವರ ಕಾಲದಲ್ಲಿ ಆಲಯ

ವಿಜಯನಗರದ ಮೂರನೆಯ ಅರಸುವಂ ದ ಆಡಳಿತಕಾಲದಲ್ಲಿ - ವಿಶೇಷವಾಗಿ ಕೃಷ್ಣ ೇವರಾಯ ಹಾಗೂ ಅಚ್ಯುತರಾಯರ ಆಡಳಿ ದ ಕಾಲದಲ್ಲಿ ಆಲಯವು ತನ್ನ ಕೀರ್ತಿ ಪತಿ ್ಠೆಗಳ ಶಿಖರವನ್ನು ಮುಟ್ಟಿತು ಸ್ವಾಮಿಗೆ ಕ ಯಾಗಿ, ಸಮರ್ಪಣೆಯಾಗಿ ಅಗಣಿತಃ ಂಪತ್ತು ಶೇಖರವಾಯಿತು ಈ ಕಾಲದಲ್ಲಿ ಾಮ್ರಾಟರು ಮಾತ್ರವೇ ಅಲ್ಲದೆ ಅವರ ರಾಣಿವಾ ಂದವರು, ಸೇನಾಪತಿಗಳು, ಆಡಳಿತ ಪ್ರತಿನಿಧಿ ಳು, ಅಧಿಕಾರಿಗಳು, ಮತ್ತಿತರ ಆಲಯ ಸೇವಾಕ ್ತರೂ ಸಹ ಆಲಯಕ್ಕೆ ದಾನ ದತ್ತಿಗಳನ್ನು ನೀಡಿ ತು.

## ಶ್ರೀಕೃಷ್ಣದೇವರಾಯ

ತಿರುಮಲೆಯ ಆಲಯದ ಶಾಸನಗಳಲ್ಲಿ ಕೃಷ್ಣ ೇವರಾಯ ಮತ್ತು ಆತನ ಈರ್ವರು ಸತೀಮ ಣಿಯರು - ಚಿನ್ನಾದೇವಿ, ತಿರುಮಲ ದೇವಿಯರು ಸುಮಾರು ಐವತ್ತು ಶಾಸನಗಳಲ್ಲಿ ಪ್ರತಿನಿಧಿಸಲ್ಪ ಟ್ಟಿದ್ದಾರೆ. ಇವುಗಳು ಶಕವರ್ಷ 1434 (ಕ್ರಿಶ 513) ರಿಂದ ಶಕವರ್ಷ 1445 (ಕ್ರಿಶ 1524) ವರೆಗೆ ಹರಡಿವೆ ಇವುಗಳಲ್ಲಿ ರಾಯನು ನ್ನ ಕುಲದೈವವೆಂದು ಬಗೆದು ಭಕ್ತಿಯಿಂದ ನಡೆ ಮಕೊಂಡ ತಿರುಮಲೆಯ ಸ್ವಾಮಿಯನ್ನು ತಾನು ರ್ಶಿಸಿದಾಗ ನೀಡಿದ ಕಾಣಿಕೆಗಳೂ, ರಾಜಧಾ ಯಲ್ಲಿದ್ದುಕೊಂಡು ನೀಡಿದ ಕಾಣಿಕೆಗಳೂ, ವಿವ ವಾಗಿ ಚಿತ್ರೀಕರಿಸಲ್ಪಟ್ಟಿವೆ ಇತರ ಕಡೆಗಳಲ್ಲಿ ಚಿತ್ರಿತವಾಗಿರುವಂತೆಯೇ, ಕೃಷ್ಣರಾಯನ ಅಧಿ ಾರ ಇಡೀ ದಕ್ಷಿಣಭಾರತದಲ್ಲಿ ಹರಡಿದ್ದಿತೆಂಬು ದರ ಪ್ರತೀಕವಾಗಿಯೆನ್ನುವಂತೆ, ಆತನ ಶಾಸನ ಗಳು ಮೂರು ಭಾಷೆಗಳಲ್ಲಿ - ತೆಲುಗು, ಕನ್ನಡ, ತಮಿಳುಗಳಲ್ಲಿ - ಲಿಖಿತವಾಗಿವೆ

ಶ್ರೀಕೃಷ್ಣದೇವರಾಯನು ತಿರುಮಲೆಯ ಆಲ ಯವನ್ನು ಏಳುಬಾರಿಗೆ ಕಡಿಮೆಯಿಲ್ಲದಂತೆ ಸಂದರ್ಶಿಸಿರಬೇಕು. ಈ ಯಾತ್ರೆಗಳ ವಿವರಗ ಳನ್ನು ಇನ್ನೊಂದು ಅಧ್ಯಾಯದಲ್ಲಿ ವಿವರಿಸಲಾ ಗಿದೆ

ಕೃಷ್ಣದೇವರಾಯನು ತಿರುಮಲೆಯಲ್ಲಿ ಸಮ ರ್ಪಿಸಿದ ಎಲ್ಲ ದಾನಗಳನ್ನೂ ಆತನ ಸ್ವಂತ ಶಿಲ್ಪಿ ಯಾದ ಪೆದ್ದಯಾಚಾರಿಯ ಮಗ ಶ್ರೀಪತಿಯಿಂದ





ಕಲ್ಲಿನಲ್ಲಿ ಮೇಲೆ ಕೊರೆಯಲ್ಪಟ್ಟು, ಅವುಗಳ ವಿಷಯವನ್ನು ಆತನ ರಾಯಸದ ಗಿಂಡಿ ಬಸವರಾಯ ಅಥವಾ ಬಾಗೂರಿ ಮಲ್ಲರಸರು ಸಿದ್ಧಪಡಿಸಿರದೇಕು ತಿ.ತಿ 578 ರಲ್ಲಿ ಹೇಳುವಂತೆ ಹಲವು ತೆರಿಗೆಗಳನ್ನು ವಸೂಲಿ ಮಾಡುವುದರ ಹೊರತು ಬೇರೆಲ್ಲೂ ಆಲಯದ ಸ್ಥಾನತ್ತಾರರ ಹೆಸರು ಬರುವುದೇ ಇಲ್ಲ ದಾನಕರ್ತರ ದಾಯಭಾಗದ ಪ್ರಸಾದದಲ್ಲಿ ಐದನೇ ಒಂದು ಭಾಗವನ್ನು ತಿರುಪ್ಪನಿ ಪಿಳ್ಳೈ ಪಡೆಯಬೇಕೆಂದೂ ಮಿಕ್ಕ ಪ್ರಸಾದವನ್ನು ರಾಜ ಹಾಗೂ ಆತನ ಇಬ್ಬರು ರಾಣಿಯರು ನೆಲೆಗೊಳಿಸಿದ ಸತ್ರಗಳಲ್ಲಿನ ಯಾತ್ರಿಕರಲ್ಲಿ ವಿತರಣೆ ಮಾಡಬೇಕೆಂದೂ ಕಟ್ಟು ಮಾಡಲಾಗಿದೆ. ಈ ಮೂವರೂ ಸಮರ್ಪಿಸಿದ ಒಟ್ಟು ನೈವೇದ್ಯವೆಂದರೆ 20 ತಿರುಪ್ಪಾನಕ, 4 ತಿರುಕಣ್ಣಮಡೈ, 4 ಅಪ್ಪಪ್ಪಡಿ ಸಾಮ್ರಾಟನನ್ನು ಅನುಸರಿಸಿ ಬಂದಂತಹ ರಂಗದೀಕ್ಷಿತರ್ ಹಾಗೂ ಶಿವದೀಕ್ಷಿತರೂ ಪ್ರಸಾದಗಳ ಒಂದು ಹಿರಿಯ ಪಾಲು ಪಡೆಯುವಂತಾಯಿತು.

ಕೃಷ್ಣದೇವರಾಯ ಮತ್ತು ಅವನ ರಾಣಿಯರು ಆಲಯಕ್ಕೆ ನೀಡಿದ ಕಾಣಿಕೆಗಳನ್ನು ಶಾಸನಾಧಾರದಲ್ಲಿ ಈ ಕೆಳಕಂಡಂತೆ ಪಟ್ಟಿ ಮಾಡಬಹುದು

## ಕ್ರಿ.ಶ. 1513 - 2 - 10 ಕಾಣಿಕೆ

1 ಒಂದು ನವರತ್ನ ಕಿರೀಟ ಇದರ ಒಟ್ಟು ತೂಕ 3308 ಕ್ಯಾರೆಟ್ ಒಮ್ಮೆಟ್ಟು 1555, ಕುಂದಣದ ಬಂಗಾರ 1076

2. ಒಂದು ಮೂರೆಳೆ ಸರ - ಮುತ್ತು ಮಾಣಿಕ್ಯ ಹವಳಗಳಿಂದ ಕೂಡಿದ್ದು ಅಡ್ಡಿಗೆಯೊಂದಿಗೆ 225 ಕ್ಯಾರೆಟ್ ತೂಕ. ಇದರಲ್ಲಿನ ಪದಕದ ತೂಕ ಬೇರೆ - 61 ಕ್ಯಾರೆಟ್.

3 ಕರ್ಪೂರ ಆರತಿಯನ್ನು ನೀಡಲು 25 ಬೆಳ್ಳಿಯ ತಟ್ಟೆಗಳು

4 ಚಿನ್ನಾಜಿ ಅಮ್ಮನವರಿಂದ : 374 ಕ್ಯಾರೆಟ್‌ಗಳ ತೂಕದ ಬಂಗಾರದ ಬಟ್ಟಲು ಒಂದು - ರಾತ್ರಿಯ ಏಕಾಂತ ಸೇವೆಯಲ್ಲಿ ಹಾಲಿನ ನಿವೇದನೆಗೆ.

5. ತಿರುಮಲದೇವಿಯವರಿಂದ - ಮೇಲಿನಂತೆಯೇ ಹಾಲಿನ ನಿವೇದನೆಗೆಂದು 374 ತೂಕದ ಒಂದು ಬಂಗಾರದ ಬಟ್ಟಲು.

## ಕ್ರಿ.ಶ. 1513 - 5 - 2 ಕಾಣಿಕೆಗಳು

6. ಒಟ್ಟು 68 ತೂಕದ ಒಂದು ಉಡಿದಾರ 5 ವಜ್ರಗಳು, 17 ಅಡ್ಡಿಕೆ, ಹವಳ, ಬಂಗಾರದ ದಾರದಿಂದ ಆಗಿದ್ದಿತು.

7 ಒಂದು ಕಠಾರಿ ಇದರ ಒರೆಯನ್ನು ವಜ್ರ, ಕೆಂಪು, ಹವಳ, ಮುತ್ತುಗಳಿಂದ ಅಲಂಕರಿಸಲಾಗಿತ್ತು ಒಟ್ಟು 326 ತೂಕ. ಇವುಗಳಲ್ಲಿ ರತ್ನಗಳು ಮಾತ್ರವೇ 165 ತೂಕ

8 ಒಂದು ನಿಶ್ಚಲ ಕಠಾರಿ ಒರೆ ದಿನವೂ ಬಳಸುವಂತಹದ್ದು. 132 ತೂಕದ ಇದರ ಮೇಲೆ ಹವಳಗಳನ್ನು ಸೇರಿಸಲಾಗಿದ್ದಿತು

9. ಒಂದು ಚಿಕ್ಕ ಕಠಾರಿ(ಬಿಚ್ವಾ)

10. ಮೇಲಿನ ಕಿರುಕಠಾರಿಗೆ ತಕ್ಕ ಮುತ್ತು, ಹವಳ, ವಜ್ರಗಳನ್ನು ಹುದುಗಿಸಿದ ಒರೆ

11. 87 ತೂಕದ ಒಂದು ಪದಕ - ಇದರಲ್ಲಿ ವಜ್ರಗಳು, ಹವಳ, ಗೋಮೇಧಿಕಗಳಿದ್ದವು

2. ಒಂದು ಜೊತೆ ಭುಜಕೀರ್ತಿಗಳು - ಒಟ್ಟು ತೂಕ 573 ರತ್ನಗಳನ್ನು ಹುದುಗಿಸಲಾಗಿದ್ದಿತು ಹಳೆಯ ವಜ್ರಗಳನ್ನು ಹೊಂದಿಸಲಾಗಿದ್ದಿತು

13. ದಿನವೂ ಬಳಸಲು 198 ತೂಕದ ಭುಜಕೀರ್ತಿ

14. ದಿನವೂ ಬಳಸಲು ಎರಡು ಜೊತೆ ಭುಜಕೀರ್ತಿ.

15. 17 ಅಡ್ಡಿಕೆಗಳ ಒಂದು ಬಂಗಾರದ ಜನಿವಾರ ಎಲೆಯಾಕಾರ, ಮುತ್ತಿನ ಆಕಾರದ, ಮೂವತ್ತು ಇತರ ಅಡ್ಡಿಕೆಗಳು ಒಟ್ಟು ತೂಕ 205.

16. 276 ತೂಕದ ಯಜ್ಞೋಪವೀತ ಒಂದು

17. ಉತ್ಸವ ಮೂರ್ತಿ ಹಾಗೂ ಉಭಯ ನಾಯಕಿಯರಿಗಾಗಿ ಒಟ್ಟು 380 ತೂಕದ ಮೂರು ಕಿರೀಟಗಳು. ಇವುಗಳಲ್ಲಿ ವಜ್ರಗಳು, ಹವಳಗಳು ಕೆಂಪುಗಳನ್ನು ಹುದುಗಿಸಲಾಗಿದ್ದಿತು. (III - 60, 61, 62, 63)

## ಕ್ರಿ.ಶ. 1514 - 7 - 6 ಕಾಣಿಕೆ

ಪ್ರತಾಪರುದ್ರ ಗಜಪತಿಯನ್ನು ಸೋಲಿಸಿ, ಉದಯಗಿರಿಯನ್ನು ಆಕ್ರಮಿಸಿದ ನಂತರ ರಾಜಧಾನಿಗೆ ಹಿಂದಿರುಗುವಾಗ ನೀಡಿದ ಕಾಣಿಕೆಗಳಿವು. (III - 66, 67, 68)

18. ಶ್ರೀ ವೆಂಕಟೇಶ್ವರಸ್ವಾಮಿಗೆ 30,000 ಬಂಗಾರದ ವರಹಗಳಿಂದ (ಚಕ್ರಪೊನ್) ಕನಕಾಭಿಷೇಕ.

19. ಮೂರೆಳೆಯ ಆಭರಣ ಒಂದು 250 ತೂಕದ್ದು ಬಂಗಾರದ ದಾರದಿಂದಲೂ, ಬಂಗಾರದ ಕೊಂಡಿಗಳಿಂದಲೂ, ಮುತ್ತು ರತ್ನಗಳಿಂದ ಕೂಡಿದ ಹಾರವಿದು

20. ಒಂದು ಜೊತೆ ಕಡಿಯಗಳು - ಕಡಗ - ಬಾಹುವಲಯ. (ತಾಳ್ಲಪಾಕ ಗ್ರಾಮವನ್ನು ನಿತ್ಯ ನಿವೇದನೆಗಾಗಿ ನೀಡಲಾಯಿತು.)

21. ಚಿನ್ನಾಜಿ ದೇವಿ ಅಮ್ಮನಿಂದ 200 ತೂಕದ ವಜ್ರ, ಮುತ್ತುಗಳಿಂದ ಕೂಡಿದ ಒಂದು ಕಂಠಮಾಲೆ. (III - 70, 71, 72)

(ನಿತ್ಯನಿವೇದನೆಗಾಗಿ ಮುಡಿಯೂರು ಗ್ರಾಮವನ್ನೂ ನೀಡಲಾಯಿತು.)

22. ತಿರುಮಲದೇವಿ ಅವರಿಂದ ಒಂದು ಚಕ್ರಪದಕ - 225 5 ತೂಕದ್ದು, ವಜ್ರ, ಮುತ್ತು ಹವಳಗಳಿಂದ ಕೂಡಿದ್ದುದು (III - 73, 74, 75)

## ಕ್ರಿ.ಶ. 1515 - 10 - 25 ಯುವಕಾರ್ತೀಕ ಬಹುಳ ತೃತೀಯ

ಪೂರ್ವದ ಕಳಿಂಗ ರಾಜ್ಯದ ಮೇಲೆ ದಂಡಯಾತ್ರೆಗೈದು ವಿಜಯವನ್ನು ಪಡೆದು ರಾಜಧಾನಿಗೆ ಹಿಂದಿರುಗುವಾಗ ನೀಡಿದ ಕಾಣಿಕೆಗಳಿವು

23 ಒಂದು ನವರತ್ನ ಪ್ರಭಾವಳಿ ಅಥವಾ ಮಕರತೋರಣ ಒಟ್ಟು ತೂಕ 27,287 ಇದರಲ್ಲಿ 25 ಕೀರ್ತಿ ಮುಖ ಪಲ್ಲವಗಳು, 13835 ಒಮ್ಮೆಟ್ಟು ಬೀಜಗಳು, ಬಂಗಾರದ ದಾರದ ತೂಕ 16 ಅಪರಂಜಿ ಚಿನ್ನ 7978 ಮಕರ ತೋರಣದ ಮೇಲೆ ಓಲಾಡುವ ರೇಷ್ಮೆ ಹಾಗೂ ಚಿನ್ನದ ಕುಸುರಿ 20 - ತೂಕ 5474. ಇದರಲ್ಲಿ 10994 ಕೆಂಪುಗಳೂ, 754 ಮರಕತಗಳು (ಪಚ್ಚೆ), 530 ಇಂದ್ರನೀಲಗಳು (ನೀಲಮಣಿ), 40 ದೆಕ್ಕಣ್ಣ ಮಣಿ, 45 ಮೆರುಗು ಮೋಳೆ, 74 ಗೋಮೇಧಿಕ 940 ಹಳೆಯ ವಜ್ರಗಳು, 3933 ಮುತ್ತುಗಳು, ನಾಲ್ಕು ದೊಡ್ಡ ಇಂದ್ರನೀಲಗಳು ಕಣ್ಣುಗಳಂತೆ ಸೇರಿಸಿದ್ದು, 6 ಹವಳಗಳು, 30 ಶಂಖಗಳೂ ಇದ್ದವು. ಮಕರ ತೋರಣದ ಬಿಟ್ಟು ತೂಕ 14711, ಆಗಿದ್ದು ಪ್ರಭಾವಳಿಯು ಇಡಿಯಾಗಿ 31124 ತೂಕವಿದ್ದಿತು.

ಕೃಷ್ಣರಾಯನಿಗೆ ಕಥಕಪುರಿ (ಒರಿಸ್ಸ) ಯನ್ನು ನೀಡಿದ ದೇವರಿಗೆ ಮೇಲಿನ ಸಮರ್ಪಣೆ ಮಾಡಲಾಗಿದೆ.

## ಕ್ರಿ.ಶ. 1517 - 7 - 2 ರ ಕಾಣಿಕೆಗಳು

ಕಳಿಂಗದೇಶದ ವಿಜಯದ ನಂತರ ಸಿಂಹಾದ್ರಿ ಪೊತ್ತೂರುವಿನಲ್ಲಿ ತನ್ನ ವಿಜಯಸ್ತಂಭವನ್ನು ಸ್ಥಾಪಿಸಿದ ನಂತರ ಹಿಂದಿರುಗುವಾಗ ನೀಡಿದ ಕಾಣಿಕೆಗಳಿವು (ತಿ ತಿ 576 ಹಾಗೂ 578).

24 ಒಂದು ಕಂಠ ಮಾಲೆ

25 ಒಂದು ಪದಕ.

26 ವಿಮಾನದ ಚಿನ್ನದ ಲೇಪನಕ್ಕಾಗಿ 30,000 ವರಹಗಳು (ಗೊಡಗೂರು ನಾಡುವಿನಿಂದ ಒಂದು ಸಾವಿರ ವರಹಗಳನ್ನು, ತಿರುವೆಂಗಡ ಮುದ್ದೆಯಾನನ ಪುಲುಗುಕಾಪ್ಪ ಸೇವೆಯ ವೆಚ್ಚಗಳಿಗಾಗಿ ಹಾಗೂ ನಿತ್ಯವೂ ಪ್ರಾತಃಕಾಲ ನಿವೇದನೆಗಳ ವೆಚ್ಚಕ್ಕಾಗಿ ಗೊಡಗೂರು ನಾಡುವಿನಿಂದ 500 ವರಹಗಳನ್ನು ವಸೂಲಿ ಮಾಡಬೇಕೆಂದೂ ಅಪ್ಪಣೆ ಮಾಡಿದನು.

(ವಿಮಾನದ ಚಿನ್ನದ ಮುಲಾಮೀಕರಣ 1518 - 9 - 9 ರಂದು ಮುಗಿಯಿತು)



## ಕ್ರಿ.ಶ. 1518 - 10 - 16

ಕಮಲಾಪುರದ ಒಂದು ಶಾಸನವು ಅತನು ತನ್ನ ರಾಣಿ ತಿರುಮಲೆ ದೇವಿಯೊಂದಿಗೆ 16 - 10 - 1518 ರಲ್ಲಿ ತಿರುಮಲೆಗೆ ಆಗಮಿಸಿದ ನೆಂದು ಹೇಳುತ್ತದೆ. ಆದರೆ ತಿರುಪತಿಯಲ್ಲಿ ಆಗಲೀ ತಿರುಮಲೆಯಲ್ಲಿ ಆಗಲೀ ಇದನ್ನು ಸಮರ್ಥಿಸುವ ಶಾಸನವಿಲ್ಲ

## ಕ್ರಿ.ಶ. 1521 - 2 - 17 ರ ಕಾಣಿಕೆಗಳು

ಈ ಬಾರಿ ತಿರುಮಲೆ ದೇವಿ ಮಾತ್ರವೇ ಕೃಷ್ಣ ರಾಯನೊಡನೆ ಬಂದಿದ್ದು ಎಂದು ತೋರು ತ್ತದೆ.

27 ನವರತ್ನ ಸಹಿತವಾದ ಪೀತಾಂಬರ ಜೊತೆ

28. ಕೆಂಪು,ನೀಲಿ, ಪಚ್ಚೆಗಳಿಂದ ಕೂಡಿದ ಕುಲಾವಿ (ತಲೆಗೆ)

29 ನವರತ್ನ ಖಚಿತವಾದ ಎರಡು ಚಾಮರಗಳು ಜೊತೆಗೆ 10,000 ವರಹಗಳು

30 ಒಂದು ಪದಕ

31 ತಿರುಮಲೆ ದೇವಿಯಿಂದ ಒಂದು ಪದಕ (ತಿ ತಿ 301, 302, 586, 594)

ಮೇಲಿನ ಕಾಣಿಕೆಗಳಷ್ಟೇ ಅಲ್ಲದೆ, ತನ್ನ ಮೂರ ನೆಯ ಸಂದರ್ಶನದಲ್ಲಿ ಎಂದರೆ 13-6-1513 ರಲ್ಲಿ, ತನ್ನ ಆಡಳಿತದ ಆರಂಭಕಾಲದಲ್ಲಿ ತನ್ನ ತಂದೆ ನರಸ ನಾಯಕ ಒಡೆಯರ್ ಹಾಗೂ ತಾಯಿ ನಾಗುಲಾಂಬಿಕೆಯವರ ಮೇಲ್ಮೆಗಾಗಿ ಹಲವು ಹನ್ನೊಂದು ರೀತಿಯ ದೇಣಿಗೆಗಳನ್ನು ಆತ ನೀಡಿದನು ಇವುಗಳಲ್ಲಿ ಒಂದು ಆಭರ ಣವು ನವರತ್ನ ಖಚಿತವಾಗಿದ್ದಿತು (ಶಾಸನವು ಮುಕ್ಕಾಗಿದ್ದು ಖಚಿತವಾಗಿಲ್ಲ) ತಮಿಳು ತೈಮಾಸ ದಲ್ಲಿ ಒಂದು ಬ್ರಹ್ಮೋತ್ಸವವನ್ನು ನಡೆಸಲು, ಸತ್ರ ವಾಡ, ತುರೂರು, ಕರಕಂಬಾಡಿ, ಗೊಡುಗೂರು ನಾಡುಗಳ ದಾನ ನೀಡಿದನು

ಕೃಷ್ಣದೇವರಾಯನ ಕೆಲವು ಅಧಿಕಾರಿಗಳೂ ಸಹ ತಿರುಮಲೆಯ ಸ್ವಾಮಿಗೆ, ಆಲಯಕ್ಕೆ ತಮ್ಮ ಕಾಣಿಕೆಗಳನ್ನು ಸಮರ್ಪಿಸಿದಂತೆ ಈ ಶಾಸನಗ ಳಲ್ಲಿ ಕಂಡುಬರುತ್ತದೆ. ಶಾಸನಗಳಲ್ಲಿ ಕಂಡುಬ ರುವ ಕೆಲವು ಹೆಸರುಗಳನ್ನು ಈ ರೀತಿ ಪಟ್ಟಿ ಮಾಡಬಹುದು

1 ಪ್ರಧಾನಿ ಸಾಳುವ ತಿಮ್ಮರಸ
2 ಸಾಳುವ ಗೋವಿಂದರಾಜ
3. ಪೆರಿಯ ಓಬಳನಾಯಕರ್ ರಾಮನಾಯಕರ್ - ಸೇನಾಧಿಪತಿ
4 ರಾಯಸಂ ಕೊಂಡಮರಸಯ್ಯ
5 ತ್ರಯಂಬಕ ದೇವ
6 ಕರಣೀಕ ಬಸವರಸ
7 ಕರಣೀಕ ಅಟ್ಟವಣೆ ಬಸವರಸ
8 ಗಿಂಡಿ ಬಸವರಾಯುಲು
9 ಅವಸರದ ನರಸಯ್ಯ ಆತನ ಸೋದರ ತಿಮ್ಮಯ್ಯ
10 ಉದಿಯಂ ಎಲ್ಲಪ್ಪ ನಾಯಕರ್
11 ಅಡೈಪ್ಪಂ ಎಲ್ಲಪ್ಪ ನಾಯಕರ್
12 ಮನ್ನಾರ್‌ಪಿಳ್ಳೈ ಹಾಗೂ ಅಪ್ಪಪ್ಪಿಳ್ಳೈ

ಆತನ ಕಾಲದಲ್ಲಿ ಆಲಯಕ್ಕೆ ದೇಣಿಗೆ ದಾನಗ ಳನ್ನು ನೀಡಿದ ಇತರ ಕೆಳ ಅಧಿಕಾರಿಗಳೆಂದರೆ-

1 ಬಾಹೂರು ಮಲ್ಲರಸ
2 ನಾಗರಾಜು
3 ತಮ್ಮನಾಯಕರ್
4 ತಿರುವೆಂಕಟಯ್ಯನ್
5 ಓಬಳಯ್ಯನ್
6 ಲಕ್ಕುನಾಯಕರ್
7 ತಿರುಮಲೈ ನಾಯಕರ್
8 ಚೆನ್ನಪ್ಪ ರೆಡ್ಡಿ
9 ರಂಜಕಂ ಶ್ರೀರಂಗರಾಜ

ಈ ಕಾಲದ ಹಲವು ಧಾರ್ಮಿಕ ಗುರುಗಳು ಹಾಗೂ ಹಲವರು ಸಮಾಜದ ಪ್ರತಿಷ್ಠಿತರೂ ಸಹ ಶಾಸನಗಳಲ್ಲಿ ಹೆಸರಿಸಲ್ಪಟ್ಟಿದ್ದಾರೆ ಕೃಷ್ಣರಾ ಯನು ಶ್ರೀ ವೈಷ್ಣವ ಪಂಥದ ಬಗ್ಗೆ ಆದರ ಅಭಿ ಮಾನಗಳನ್ನು ಹೊಂದಿ ಆಚರಣೆಯಲ್ಲಿ ತಂದಿ ದ್ದನೆಂಬುದು ಆತನ ವಿಷ್ಣುಚಿತ್ತೀಯಂ ಅಥವಾ ಆಮುಕ್ತ ಮಾಲ್ಯದ ಕೃತಿಯಲ್ಲಿ ಪ್ರಸ್ಫುಟವಾಗಿ ದ್ದರೂ ಸಹ ಮಾಧ್ವ ಸಂಪ್ರದಾಯದ ಶ್ರೀಪಾದ ರಾಜರ ಶಿಷ್ಯರಾದ ಗುರು ಶ್ರೀ ವ್ಯಾಸರಾಯರನ್ನು ಆದರದಿಂದ ಕಂಡು ಭಕ್ತಿಯಿಂದ ನಡೆದುಕೊ ಳ್ಳುತ್ತಿದ್ದ. ವ್ಯಾಸರಾಜರು ವ್ಯಾಸರಾಜ ಮಠದ ಸ್ಥಾಪಕರು.ವ್ಯಾಸಕೂಟ ದಾಸಕೂಟಗಳನ್ನು ಕಟ್ಟಿ ಮಾಧ್ವ ಸಿದ್ಧಾಂತವನ್ನು, ಹರಿಸರ್ವೋತ್ತಮತೆ ಯನ್ನು ಹರಡಿದರು ಅವರ ಹೆಸರಿನ ಮುಂದೆ ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ, ಪದವಾಕ್ಯ ಪ್ರಮಾಣಜ್ಞ, ದುರ್ವಾದಿ ಗರ್ವಸರ್ವ ಸ್ವಾಪಹಾರ, ಶ್ರೀಮತ್ ವೈಷ್ಣವಸಿದ್ಧಾಂತ ಪ್ರತಿಷ್ಠಾ ಪಕಾಚಾರ್ಯ, ಸಕಲವಿದ್ವಜ್ಜನಮನಃ ಪದ್ಮ ವನ ಸೌಪಸ್ತಿಕ - ಎಂದು ಗೌರವದಿಂದ ಸೇರಿ ಕರೆಯ ಲಾಗುತ್ತಿದ್ದಿತು

ಶ್ರೀವೈಷ್ಣವರ ವಡಗಲೆ ಪಂಗಡದ ಅಹೋ ಬಿಲ ಮಠವನ್ನು ಸ್ಥಾಪಿಸಿದ ಶ್ರೀವಣ್ ಶಠ ಗೋಪ ಜೀಯರ ಶಿಷ್ಯರೂ ವಾರಸರೂ ಆದ ಶ್ರೀಮನ್ನಾರಾಯಣಜೀಯರು ಶ್ರೀಮತ್ ವ್ಯಾಸ ತೀರ್ಥರ ಹಿರಿಯ ಸಮಕಾಲೀನರು ನಾರಾ ಯಣ ಜೀಯರು ತಮ್ಮ ಧರ್ಮಪ್ರಸಾರದ ದೇಶ ಸಂಚಾರ ಕಾಲದಲ್ಲಿ ಕೆಲವು ಕಾಲ ತಿರುಪತಿಯಲ್ಲಿ ತಂಗಿರದೇಕು ತಾವು ಇದ್ದ ಮೂರು ತಿಂಗ ಳಲ್ಲಿ ಎರಡು ಬಾರಿ ಇವರು ಆಲಯಕ್ಕೆ ದಾನ ನೀಡಿದರು ಒಮ್ಮೆ 1860 ನರ್ಪಣವಾದರೆ ಇನ್ನೊಮ್ಮೆ 3800 ನರ್ಪಣಗಳು 1438 ರ ಶಕದ ಧಾತು ನಾಮ ಸಂವತ್ಸರದಲ್ಲಿ ಈ ದಾನ ಗಳು ನಡೆದವು. ಕ್ರಿಶ 1516 ರ ಆಗಸ್ಟ್ 26 ರಂದು ಮೊದಲನೆಯ ದಾನವು ನಡೆದರೆ ಅದೇ ಸಂವತ್ಸರದ ನವಂಬರ್ 7 ರಂದು ಎರ ಡನೆಯ ದಾನವು ನಡೆಯಿತು ಈ ಮೂಲಧ ನದ ಮೇಲೆ ಉಂಟಾಗುವ ಬಡ್ಡಿಯ ಹಣದಿಂದ ಶ್ರೀ ವೆಂಕಟೇಶ್ವರಸ್ವಾಮಿ, ಶ್ರೀ ಗೋವಿಂದರಾಜ ಸ್ವಾಮಿ, ಆಳ್ವಾರರು ಹಾಗೂ ಉಡೆಯವರ್‌ಗಳಿಗೆ ಗೊತ್ತಾದ ದಿನಗಳಂದು (ಜಿ ಟಿ 60 ಹಾಗೂ 106) ನಿವೇದನೆಯನ್ನು ಅರ್ಪಿಸಲು ಏರ್ಪಾಡು ಮಾಡಿದೆ ಈ ನಾರಾಯಣ ಜೀಯರ ಗುರು ವಾದ ಈ ವಣ್ ಶಠಗೋಪ ಜೀಯರೇ ಕೃಷ್ಣದೇ ವರಾಯನ ಆಸ್ಥಾನ ಕವಿಯಾದ ಅಲ್ಲಸಾನಿ ಪೆದ್ದ ನನು ತನ್ನ ಗುರುವೆಂದು ಗೌರವ ಸೂಚಿಸುತ್ತ ತನ್ನ ಮನುಚರಿತ್ರಮು (ಅಧ್ಯಾಯ 1 - ಪೀಠಿಕಾ ಸಂಧಿ ಪದ್ಯ - 6) ಕೃತಿಯಲ್ಲಿ ಎಲ್ಲ ವಿದ್ಯೆಯ ಮೂಲ ಸ್ಥಾನವೆಂದೂ, ತನ್ನ ಕರುಣಾಪೂರ್ಣ ದೃಷ್ಟಿಯ ಬೆಳುದಿಂಗಳಿನಿಂದ ಶಿಷ್ಯರ ಅಜ್ಞಾನ, ಪಾಪಗಳ, ತಮವನ್ನು ಕಳೆಯುವವನೆಂದೂ ಕೀರ್ತಿಸಿರುವ ಶಠಗೋಪ ಯತಿ ಆಗಿರದೇಕು

ಇಲ್ಲಿನ ಹಲವು ಶಾಸನಗಳಲ್ಲಿ ಕೆಲವರು ಶ್ರೋತ್ರೀಯ ಬ್ರಾಹ್ಮಣರೂ ಕಂಡು ಬರುತ್ತಾರೆ ಪಡೆವೀಡು ರಾಜ್ಯದ ಅಗರಂ ಕಂಪಸಮುದ್ರದ ನಿವಾಸಿ ಆಪಸ್ತಂಭ ಸೂತ್ರದ ಗೌತಮ ಗೋತ್ರದ ವನಾದ ತತ್ವಾದಿ ತಿರುಮಲಯ್ಯನ ಮಗ ನಾರಾ ಯಣಯ್ಯ ಅಥವಾ ನಾರಾಯಣದೇವ ಇಂತಹ ಒಬ್ಬ ಶ್ರೋತ್ರೀಯ ಬ್ರಾಹ್ಮಣ ಈತ ಶಕ 1436 ಭಾವ ಸಂವತ್ಸರದಲ್ಲಿ ತನ್ನ ಶ್ರೋತ್ರೀಯ ಗ್ರಾಮಗ ಳಲ್ಲಿ ಒಂದಾದ - ಕೊಂಡವಲಿ ಸೀಮೆಯ ತಿವ ಳೈಪ್ಪೂಂಡಿ. ಗ್ರಾಮದ ದಾನ ನೀಡಿದ್ದು ಎರಡು ಶಾಸನಗಳಲ್ಲಿ ದಾಖಲಾಗಿದೆ (ತಿ ತಿ. 27, 284) (26-7-1514) ತಂದೆಯಾದ ತತ್ವಾದಿ

ತಿಮ್ಮಣ್ಣನ್ (ತಿರುಮಲಯ್ಯನ್) ನ ಅವಿಚ್ಛಿನ್ನ ಭಕ್ತಿ ಪ್ರಪತ್ತಿಗಳು ತಿ ತಿ 344 ನೇ ಶಾಸನ ದಲ್ಲಿ ವ್ಯಕ್ತವಾಗಿದೆ 1452 ಶಕ, ವಿಕೃತಿ ಸಂವ ತ್ಸರದಲ್ಲಿ ಗಂಡಿಕೋಟೆ ಸೀಮೆಯ ಮುತ್ತೂರು ಗ್ರಾಮವನ್ನು ನೀಡಿದ (29-12-1529) (ತಿ ತಿ 927) ಸಾಲೈಪಕ್ಕಂ ನರಸಯ್ಯರ್ ಮತ್ತೊಬ್ಬ ಶ್ರೋತ್ರೀಯ ಬ್ರಾಹ್ಮಣ ಈತ ಕಶ್ಯಪಗೋತ್ರದ ಅಶ್ವಲಾಯನ ಸೂತ್ರ - ಋಕ್ ಶಾಖೆಯ ಮಂತ್ರ ವಾದಿ ಮಾದರಸರ ಪುತ್ರ. ಕೃಷ್ಣದೇವರಾಯನ ಕಾಲದಲ್ಲಿ, ಶ್ರೀ ವೆಂಕಟೇಶ್ವರಸ್ವಾಮಿಯ ಆಸ್ಥಾನದ ವಂಶಪಾರಂಪರ್ಯದ ಗಾಯಕರಾದ ತಾಳ್ಳಪಾಕ ಕವಿಗಳ ಒಂದೇ ಒಂದು ಶಾಸನ ತಿ.ತಿ 76 - ಕಂಡುಬರುತ್ತದೆ. ಶಕ 1439 ರ ಈಶ್ವರ ಸಂವತ್ಸರದಲ್ಲಿ (30-11-1517) ಋಕ್ ಶಾಖೆಯ ಅಶ್ವಲಾಯನ ಸೂತ್ರದ ಭಾರದ್ವಾಜಗೋತ್ರದ ಅನ್ನಮಯ್ಯಂಗಾರ್ಯರ ಮಗ ತಾಳ್ಲಪಾಕ ತಿರುಮಲಯ್ಯಂಗಾರ್ಯನು ಸ್ವಾಮಿಯ ನಿತ್ಯ ಸೇವೆಗೆಂದು ಆಲಯ ಭಂಡಾರಕ್ಕೆ 1500 ನರ್ಪಣಗಳನ್ನು ನೀಡಿದ್ದನ್ನು ಇದು ಗುರುತಿಸುತ್ತದೆ.

ನಗರತ್ತಾರರಲ್ಲಿ ಹಲವರು ಇಲ್ಲಿ ಕಂಡುಬರುತ್ತಾರೆ ತಿರುಪತಿಯ ಒಂದು ಉಪವಿಭಾಗವಾದ ನರಸಿಂಗರಾಯ ಪುರದಲ್ಲಿ ವಾಸಿಸುತ್ತಿದ್ದ ಕುಂಡಿನ ಗೋತ್ರದ ವೆಂದ್ಯೆಯರಂ ಚೆನ್ನಮು ಸೆಟ್ಟಿಯ ಮಗನಾದ ಪಪ್ಪುಸೆಟ್ಟಿ ಇಂತಹ ನಗರ ವಾಸಿಗಳಲ್ಲಿ ಒಬ್ಬ. ಶಕ 1434 ರಲ್ಲಿ ಆಂಗಿರಸ ವರ್ಷದಲ್ಲಿ ಈತ ತನ್ನ ಹೆಸರಿನಲ್ಲಿಯೂ, ತನ್ನ ತಂದೆ ಚೆನ್ನಮು ಸೆಟ್ಟಿ ಹಾಗೂ ತಾಯಿ ಮಾರಕ್ಕನವರ ಹೆಸರಿನಲ್ಲಿಯೂ ಶ್ರೀ ವೆಂಕಟೇಶ್ವರಸ್ವಾಮಿ, ಶ್ರೀ ಗೋವಿಂದರಾಜಸ್ವಾಮಿ, ಹಾಗೂ ಮತ್ತಿತರ ದೇವರುಗಳ ಸೇವೆಗೆಂದು 2500 ನರ್ಪಣಗಳನ್ನು ನೀಡಿದ (1512 - ತಿ ತಿ 267) ಇದೇ ತಿರುಪತಿಯ ನರಸಿಂಗಾಪುರದಲ್ಲಿ ವಾಸಿಸುತ್ತಿದ್ದ ಧರ್ಮಾಪುರಂ ತಿಮ್ಮುಸೆಟ್ಟಿಯ ಮಗ ಕೊಂಡು ಸೆಟ್ಟಿ ಮತ್ತೊಬ್ಬ ನಾಗರಿಕ ಯಾವುದೋ ಕಾರಣಕ್ಕಾಗಿ ಶ್ರೀಕೃಷ್ಣರಾಯನು ಈತನಿಗೆ ವೇಲಮಪಾಳ್ಯದ ಹತ್ತಿರದ ಚೆನತಯ ಪಲ್ಲಿಯನ್ನು ಉಂಬಳಿಯಾಗಿ ನೀಡಿದ್ದನು ಕೃಷ್ಣದೇವರಾಯನು ತನ್ನ ಆಡಳಿತದ ಆರಂಭಕಾಲದಲ್ಲಿ ಎಂದರೆ ಶಕ ವರ್ಷ 1433 ರ ಪ್ರಜಾಪತಿ ನಾಮಸಂವತ್ಸರ ಕರ್ಕಾಟಕ ಬಹುಳ ಚತುರ್ದಶಿಯ ಮೊದಲು (23-11-1511) ದಕ್ಷಿಣ ದಂಡಯಾತ್ರೆಯನ್ನು ಆರಂಭಿಸಿದಾಗ ಸೈನ್ಯಕ್ಕೆ ಸಾಮಾನುಗಳ ಸರಬರಾಜು ಮಾಡಿ ಸೇವೆ ಸಲ್ಲಿಸಿದ್ದಕ್ಕೆ ಪ್ರತಿಯಾಗಿ ಈ ಗ್ರಾಮವನ್ನು ಇನಾಂ ಆಗಿ ನೀಡಿರಬೇಕು 1512 ರ ಸೆಪ್ಟಂಬರ್ 22 ರಂದು ಶಿವನ ಸಮುದ್ರದಲ್ಲಿ ರಾಜಕಾರ್ಯದಲ್ಲಿ ಪಾಳಯ ಹೂಡಿದಾಗ ರಾಜನಿಗೂ ತನಗೂ ವಿಜಯ ದೊರೆಯಲೆಂದು ವೀರಯ್ಯ ದಂಡನಾಯಕನು ತಂಜಾವೂರಿನ ಸಂದಲ್ಯೆ ಆಲಯಕ್ಕೆ ಸರ್ವಮಾನ್ಯ ಗ್ರಾಮವನ್ನು ನೀಡಿದಾಗ ಹೇಳುವಂತೆ 1926 ರ 213 ರ ಶಾಸನದಲ್ಲಿ ದಾಖಲೆಯಾಗಿದೆ ಈ ಹೊತ್ತಿಗಾಗಲೇ ಕೊಂಡು ಸೆಟ್ಟಿಯು ಶ್ರೀಕಾಳಹಸ್ತಿ ಗಿರೀಶ್ವರಸ್ವಾಮಿಗೆ - ಶ್ರೀಕಾಳಹಸ್ತಿಯ ಶ್ರೀಕಾಳಹಸ್ತೀಶ ಸ್ವಾಮಿ ಗೆ - ಗ್ರಾಮದ ಅರ್ಧಭಾಗವನ್ನು ದಾನನೀಡಿದ್ದು ಮಿಕ್ಕ ಅರ್ಧಭಾಗವನ್ನು ಶ್ರೀ ವೆಂಕಟೇಶ್ವರ ಸ್ವಾಮಿ, ಶ್ರೀ ಗೋವಿಂದರಾಜಸ್ವಾಮಿಗಳಿಗೆ ನಿತ್ಯ ಸೇವೆ ಮಾಡಲು ಶಕ 1439 ರ ಈಶ್ವರ ಸಂವತ್ಸರದಲ್ಲಿ (27-11-1517) ಆಲಯಕ್ಕೆ ನೀಡಿದನು ಎದುರಿಗೆ ಬರುವ ಮೂರನೆಯ ವರ್ತಕ ಪ್ರಮುಖನೆಂದರೆ ತಿರುಪತಿಯ ನಿವಾಸಿಯಾದ ವೆಣ್ಣಕ್ಕ ಗೋತ್ರದ ಪೆರಿಯ ಪೆಂಗಂಡ್ಯೆಯ ಮಗನಾದ ಶರಣು ಸೆಟ್ಟಿ. ಶಕ 1449 ರ ಸರ್ವಜಿತ್ ನಾಮ ಸಂವತ್ಸರದಲ್ಲಿ (16-8-1527) ಈತನು 3700 ಪಣಂಗಳನ್ನು ರೇವಣಿಯಾಗಿಟ್ಟು ಶ್ರೀ ವೆಂಕಟೇಶ್ವರಸ್ವಾಮಿಗೆ ಹಾಗೂ ಶ್ರೀ ಗೋವಿಂದರಾಜಸ್ವಾಮಿಗೆ ಹಲವು ಸೇವೆ ಏರ್ಪಡಿಸಿದನು ನಗರತ್ತಾರ್ ಎಂಬ ಪದಕ್ಕೆ ಹಲವು ಸಲ ಗ್ರಾಮ ಪಂಚಾಯತಿಯ ಸದಸ್ಯ ಎಂಬ ಅರ್ಥವನ್ನೂ ನೀಡಲಾಗಿದೆ ಆದರೆ ಈ ದಾಖಲೆಗಳಲ್ಲಿ ಬಳಸಲಾಗಿರುವ ಅತಿ ಸೀಮಿತ ಅರ್ಥದಲ್ಲಿ ಈ ಪದವನ್ನು ವೈಶ್ಯ ಅಥವಾ ಕೋಮಟಿ ಜನಾಂಗವನ್ನು ಮಾತ್ರ ಉದ್ದೇಶಿಸಿ ಬಳಸಲಾಗಿದ್ದು, ಭಾರತದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ವ್ಯಾಪಾರ ವಹಿವಾಟು ನಡೆಸುತ್ತ ಬಂದಿರುವ ವರ್ತಕ ಜನಾಂಗವನ್ನೇ ಕುರಿತದ್ದಾಗಿರಬೇಕು

## ಅಚ್ಯುತರಾಯ

ಅಚ್ಯುತರಾಯನು ಪಟ್ಟಾಭಿಷಿಕ್ತನಾದ ಮೇಲೆ ತಿರುಮಲೆಯ ಆಲಯವು ತನ್ನ ಅಭಿವೃದ್ಧಿಯ ಅತ್ಯುನ್ನತ ನೀರಿನ ಗೆರೆಯನ್ನು ತಲುಪಿತು ಎನ್ನಬೇಕು ಆತನು ಆಲಯಕ್ಕೆ ಅಸಂಖ್ಯವಾದ ಸೇವೆಗಳನ್ನು ಸಮರ್ಪಣೆಗಳನ್ನು ಮಾಡಿದ್ದಾನೆ. ಆತನ ರಾಣಿ ವರದಾಜಿ ಅಮ್ಮಣ್ಣಿಯು ತಿರುವೆಂಕಟ ಮುಡಿಯಾನನ ಆಲಯದಲ್ಲಿ ಅವಸರ ಕಾರ್ಯಕ್ರಮವನ್ನು ಏರ್ಪಡಿಸಿದಳು

ಶಾಸನಗಳಲ್ಲಿ ಕಂಡುಬರುವ ಅಚ್ಯುತರಾಯನ ಅಧಿಕಾರಿಗಳಲ್ಲಿ ಹಲವರೆಂದರೆ,

1 ಪ್ರಧಾನಿ ಸಾಳುವ ತಿಮ್ಮಣ್ಣ
2 ಸಾಳುವ ಗೋವಿಂದರಾಜ
3 ರಾಯಸಂ ಕೊಂಡಮರಸಯ್ಯ
4 ಕರಣಿಕ ಬಸವರಸ
5 ಉದಿಯಂ ಎಲ್ಲಪ್ಪನಾಯಕರ್
6 ದ್ಯೆಯಪ್ಪ ನಾಯಕರ್
7 ಸಲಕರಾಜ ಪೆರಿಯ ತಿರುಮಲರಾಜ
8 ಸಲಕರಾಜ ಸಿರು ತಿರುಮಲರಾಜ
9 ಭೂತನಾಧ ರಾಮ ಭಟ್ಟಯ್ಯ
10 ಭೂತನಾಥ ಎಲ್ಲಪ್ಪಯ್ಯ
11 ಇಮ್ಮಡಿ ಎಲ್ಲಪ್ಪಯ್ಯ
12 ಬಯಕಾರ ರಾಮಪ್ಪಯ್ಯ
13 ದಳವಾಯಿ ತಿಮ್ಮರಸಯ್ಯ
14. ಪೆರಂಕೊಂಡ್ಯೆ ವೀರಪ್ಪಣ್ಣ



15. ಅಂಗರಾಜ ನಾಗಪ್ಪಯ್ಯ
16. ಅಡ್ಮೆಯಪ್ಪಂ ವಿಶ್ವನಾಥನಾಯಕ
17. ರಾಯಸಂ ರಾಮಚಂದ್ರ ದೀಕ್ಷಿತ
18 ಅಡ್ಮೆಯಪ್ಪಂ ಮಲ್ಲಪ್ಪನಾಯಕ
19. ಭಂಡಾರಂ ತಿಮ್ಮಪ್ಪ ಸಿರುತಿಮ್ಮಯ್ಯ
20 ನೋಟ್ಟಸಾರ ನಾಗಪ್ಪ
21. ದಳವಾಯಿ ಕೃಷ್ಣಪ್ಪನಾಯಕ
22. ಪೆರಿಯ ತಿಮ್ಮಪ್ಪ ಹಾಗೂ ಚಿನ್ನರಾಮಪ್ಪ.
23. ಶ್ರೀರಂಗನಾಯಕ
24. ಸಜ್ಜರವ್ರತು ಚಿಕ್ಕಯ್ಯ ಸಾವಯನ್
25 ಮಟ್ಲ ರಾಮಯ್ಯ
26. ಅಸ್ತಿಗಿರಿನಾಥರ್
27. ಗಂಗುರೆಡ್ಡಿ
28. ಅಡ್ಮೆಯಪ್ಪಂ ಪರ್ಮಾದಮ್ಮನ್ ಹಾಗೂ ರುಕ್ಮಿಣಿಯಮ್ಮ
29 ವೆಂಗಳಯ್ಯರ್.
30 ಮಲೆಯಪ್ಪ ರಾಜನ್.
31 ವೆಂಕಟಾದ್ರಿ ಅಯ್ಯನ್
32 ಕಾಳಹಸ್ತಿ ದೀಕ್ಷಿತ
33 ಮಲ್ಲರಸರ್ ನಗರಗಳ್
34 ಗೋವಿಂದ ಪಂಡಿತ
35 ಪಂಡಿತ ಪುರುಷೋತ್ತಮಯ್ಯ
36 ನಾರಾಯಣ ಶೆಟ್ಟಿ
37 ಪೆರಿಯ ಸಾಮು ಸೆಟ್ಟಿ
38 ನಾಮಿಸೆಟ್ಟಿ
39 ಚರಣು ಸೆಟ್ಟಿ
40 ಕೃಷ್ಣಪ್ಪ ಸೆಟ್ಟಿ
41. ತಿರುಮಲೈನಾಥರ್ ಪಿಳ್ಳೈ.
42. ಪಿಳಾಯ್‌ಪೂರುತ್ತರ್
43 ಅಲ್ಲಪ್ಪ ಪಿಳ್ಳೈ

## ಸದಾಶಿವರಾಯ

ತಿರುಮಲೆಯ ಆಲಯದ ಶಾಸನಗಳಲ್ಲಿ ನೂರ ಐವತ್ತಕ್ಕಿಂತಲೂ ಹೆಚ್ಚು ಶಾಸನಗಳಲ್ಲಿ ಸದಾಶಿವರಾಯನು ಪ್ರತಿನಿಧಿಸಲ್ಪಟ್ಟಿದ್ದು ಎಲ್ಲವೂ ಅವನ ಪ್ರಶಸ್ತಿಯೊಡನೆ ಆರಂಭವಾಗುತ್ತವೆ ಈ ಪ್ರಶಸ್ತಿಯ ಒಂದು ವೈಶಿಷ್ಟ್ಯವೆಂದರೆ ದಕ್ಷಿಣ ಭಾರತದ ಭೂಭಾಗದ ಮೂರು ದಿಕ್ಕಿನ ಸಮುದ್ರ ಪರ್ಯಂತ ಭೂಮಿಯ ಅರಸನೆಂದು ಘೋಷಿಸುವುದೇ ಅಲ್ಲದೆ ಭಾರತದ ಮೇಲ್ಮೆ ಲಕ್ಷಣದಲ್ಲಿ ಇಲ್ಲದ ಉತ್ತರ ಸಮುದ್ರದ ವರೆಗಿನ ಒಡೆತನವನ್ನೂ ಇವನಿಗೇ ಆರೋಪಿಸಲಾಗಿರುವುದು ಈ ಶಾಸನಗಳಲ್ಲಿ ಸದಾಶಿವರಾಯನ ಅತಿ ಪ್ರಾಚೀನ ಉಲ್ಲೇಖವೆಂದರೆ ಶಕವರ್ಷ 1463 ರ ಪ್ಲವನಾಮಸಂವತ್ಸರದ ಕರ್ಕಾಟಕ ಮಾಸದ ಬಹುಳ ದ್ವಾದಶಿಯ ಪುನರ್ವಸು ನಕ್ಷತ್ರದ ಗುರುವಾರ ದೊರೆಯುವುದು (21-7-1541) (ತಿ ತಿ 659) ಇದರಂತೆ ಯಂದಲೂರು ತಿರುಮಲೆ ಜೋಯಿಸರ ಮಗನಾದ ಶ್ರೀರಾಮ ಭಟ್ಟರ್ ಆಲಯಕ್ಕೆ ಮುತ್ತೂರು ಹಾಗೂ ಇನ್ನೊಂದು ಹಳ್ಳಿಯನ್ನು ದಾನವಾಗಿ ನೀಡಿದನು ಈ ದಾನವು ತಿ ತಿ 504 ರಲ್ಲಿ ಇವನ ಹಿಂದಿನವನಾದ ಅಚ್ಯುತರಾಯನ ಆಳ್ವಿಕೆಗೆ ಹೇಳಲಾದ ಶಕವರ್ಷ 1463 ರ ಪ್ಲವನಾಮ ಸಂವತ್ಸರ ಮೀನ ಮಾಸದ ಶುಕ್ಲ ಸಪ್ತಮಿ ಆರುದ್ರಾ ನಕ್ಷತ್ರದ ಗುರುವಾರಕ್ಕಿಂತ ಎಂಟು ತಿಂಗಳು ಹಿಂದಿನದಾಗುತ್ತದೆ (23-3-1542) ಶಕವರ್ಷ 1459 ರ ಹೇವಿಳಂಬಿ ನಾಮಸಂವತ್ಸರದಲ್ಲಿಯೇ ಎಂದರೆ (1537) ಐದು ವರ್ಷಗಳ ಮೊದಲೇ ಸದಾಶಿವರಾಯನನ್ನು ಯುವರಾಜನನ್ನಾಗಿ ನಿಯಮಿಸಲಾಗಿದ್ದಿತೆಂದು ಹೇಳಲಾಗಿದೆ ಈ ಹೇಳಿಕೆಯು ಶಕ 1460 ರಲ್ಲಿನ ವಿಳಂಬಿ ನಾಮ ಸಂವತ್ಸರದ ಲೇಪಾಕ್ಷಿಯ ಶಾಸನದ (89 - 1912) ಲ್ಲಿ ಹೇಳುವಂತೆ ದೇವರಾಯಪುರಕ್ಕೆ ಸದಾಶಿವಪುರ ಎಂಬ ಹೆಸರು ನೀಡಲಾಯಿತೆಂಬುದರಿಂದ ಸಮರ್ಥಿತವಾಗುತ್ತದೆ

ಸದಾಶಿವರಾಯನ ಇತ್ತೀಚಿನ ಕಾಲದ ದಾಖಲೆಯೆಂದರೆ ಶಕವರ್ಷ 1495 ರ ಶ್ರೀಮುಖನಾಮ

ಸಂವತ್ಸರದ ಕುಂಭಮಾಸದ್ದು (29-1-1574) (ಜಿ ಟಿ 133) ಇಲ್ಲಿ ಒಬ್ಬಾನೊಬ್ಬ ಅರವೀಡು ವಂಶೀಕನು ಆಲಯಕ್ಕೆ ದೇಣಿಗೆಯನ್ನು ನೀಡಿದ್ದಾನೆ ದೇರೆಡೆಯಲ್ಲಿ ಈತನಿಗೆ ಇನ್ನೂ ಈಚಿನ ಉಲ್ಲೇಖ ದೊರೆಯುತ್ತದೆ ಅದೆಂದರೆ ಶಕವರ್ಷ 1497 ರ ಯುವ ಸಂವತ್ಸರದ ಋಷಭ ಮಾಸದ್ದು (9-5-1575) ಈ ನಂತರದ ದಾಖಲೆಯಿಂದಾಗಿ ಒಂದನೇ ತಿರುಮಲನು ರಾಜ್ಯದ ಆಡಳಿತವನ್ನು ಶಕ 1493 ರಲ್ಲಿ ವಾಸ್ತವವಾಗಿ ತನ್ನ ಕೈವಶ ಮಾಡಿಕೊಂಡ ಮೇಲೆಯೂ ಸದಾಶಿವರಾಯನ ನಾಮಮಾತ್ರ ಅರಸುತನ ಮುಂದುವರೆದಿದ್ದಿತು ಎಂಬುದು ಸೂಚಿತವಾಗುತ್ತದೆ ಶಕವರ್ಷ 1492 ರ ವರೆಗೆ ಒಂದನೇ ತಿರುಮಲನಿಗೆ ಮಹಾಮಂಡಲೇಶ್ವರ ಬಿರುದು ಮಾತ್ರವಿದ್ದು ನಂತರದಲ್ಲಿ ಸಾಮ್ರಾಟ ಪ್ರಶಸ್ತಿ ಪಡೆದದ್ದು ಅವನ ನಿಜ್ಯಕ್ತಿಯನ್ನು ಬಯಲಿಗಿಡುತ್ತದೆ ಹೀಗಾಗಿ ಅಚ್ಯುತರಾಯನ ಆಡಳಿತದ ಕೊನೆಗಾಲದ ಸಹಿತವಾಗಿ ಸದಾಶಿವರಾಯನ ಆಡಳಿತವು ಶಕವರ್ಷ 1459 ರಿಂದ 1497 ರ ವರೆಗೆ ಸುಮಾರು ನಲವತ್ತು ವರ್ಷಗಳ ಕಾಲ ಹರಡಿದ್ದಿತು ಎಂದು ಹೇಳಬೇಕು

ಸದಾಶಿವರಾಯನು ತಿರುಮಲೆಗೆ ಎರಡು ಸಾರಿ ಬಂದು ಸ್ವಾಮಿಯನ್ನು ಸಂದರ್ಶಿಸಿದ ಎಂದು ಶಾಸನಗಳಲ್ಲಿ ಸೂಚಿಸಲಾಗಿದೆ ಮೊದಲನೆಯದು ಕ್ರಿಶ 1554 ಹಾಗೂ ಎರಡನೆಯದು ಕ್ರಿಶ 1563 ರಲ್ಲಿ ರಾಜನು ಖಾಸಗೀ ವ್ಯಕ್ತಿಗಳಿಗೆ ನೀಡಿದ ಬಹುಮಾನಗಳೂ ಕೆಲವು ಕಂಡುಬರುತ್ತವೆ

ಅಳಿಯ ರಾಮರಾಜನು ವಿಜಯನಗರದ ಸಿಂಹಾಸನದ ಮೇಲೆ ಸದಾಶಿವರಾಯನನ್ನು ಪ್ರತಿಷ್ಠಾಪಿಸಿದುದರಿಂದಾಗಿ ಅರವೀಡು ಮತ್ತಿತರ ರಾಜಮನೆತನಗಳ ಪ್ರಮುಖರೆಲ್ಲ ಒಟ್ಟಿಗೆ ಈತನನ್ನು ಬೆಂಬಲಿಸುವಂತಾಗಿದ್ದಿತು ತಿರುಮಲೆಯ ಶಾಸನಗಳಲ್ಲಿ ಅರವೀಡು ಮನೆತನದ ಹತ್ತಕ್ಕೂ ಹೆಚ್ಚುಮಂದಿ ಸೋದರರು - ಸೋದರ ಸಂಬಂಧಿಗಳು ಆಗಿದ್ದವರು ಕಂಡುಬರುತ್ತಾರೆ ಈ ಕಾಲದಲ್ಲಿ ತಿರುಮಲೆಯ ಆಲಯ ವ್ಯವಹಾರಗಳಲ್ಲಿ ಪ್ರಮುಖ ಪಾತ್ರವನ್ನು ಇವರು ವಹಿಸಿದರು ಅವರುಗಳೆಂದರೆ ಪೊಟ್ಲಪಾಟಿ ತಿಮ್ಮರಾಜ - ಅವನ ನಾಲ್ಕು ಮಕ್ಕಳು - ತಿಮ್ಮರಾಜ, ವಿಠಲರಾಜ, ಚಿನ್ನ ತಿಮ್ಮರಾಜ, ಹಾಗೂ ಪಾಪತಿಮ್ಮರಾಜ ಅಳಿಯ ರಾಮರಾಜ ಹಾಗೂ ತಿರುಮಲರಾಜ, ಕೊಂಡರಾಜ, ಪೊಟ್ಲಪಾಟಿ ರಂಗರಾಜ ಹಾಗೂ ಶ್ರೀಪತಿ ಓಬಳೇಶ್ವರ ಅರವೀಟಿ ಬುಕ್ಕರಾಜನ ಮೊಮ್ಮಗನೂ, ರಾಮರಾಜನ ಮಗನೂ ಆಗಿದ್ದ ಪೊಟ್ಲಪಾಟಿ ತಿಮ್ಮರಾಜನು ಇವರಲ್ಲಿ ಹಿರಿಯ ತಿಮ್ಮರಾಜನ ಇಬ್ಬರು ತಮ್ಮಂದಿರು ಪೆದ್ದಕೊಂಡರಾಜ ಹಾಗೂ ಶ್ರೀರಂಗರಾಜ ತಿಮ್ಮರಾಜನಿಗೆ ಪತ್ನಿ ಗೋಪಮಾಂಬೆಯಿಂದ ನಾಲ್ಕು ಜನ ಮಕ್ಕಳು - ತಿಮ್ಮರಾಜ ಅಥವಾ ತಿರುಮಲರಾಜ, ವಿಠಲರಾಜ, ಚಿನ್ನ ತಿಮ್ಮರಾಜ, ಪಾಪತಿಮ್ಮರಾಜ, ಪೆದ್ದಕೊಂಡರಾಜನ ಮಗ ಕೋನೇಟಿರಾಜ ಇವನಿಗೆ ನಾಲ್ವರು ಮಕ್ಕಳು - ಓಬಳರಾಜ, ಕೊಂಡರಾಜ, ತಿಮ್ಮರಾಜ, ರಂಗರಾಜ, ಶ್ರೀರಂಗರಾಜನಿಗೆ ಐದು

ಮಂದಿ ಮಕ್ಕಳು - ಕೋನರಾಜ, ತಿಮ್ಮರಾಜ, ಅಳಿಯ ರಾಮರಾಜ, ತಿರುಮಲರಾಜ ಹಾಗೂ ವೆಂಕಟಾದ್ರಿರಾಜ. ಜೊತೆಗೇ ಗೊಬ್ಬೂರು ಮತ್ತಿತರ ಮನೆತನಗಳಿಗೆ ಮದುವೆ ಮಾಡಿಕೊಟ್ಟ ನಾಲ್ಕು ಮಂದಿ ಹೆಣ್ಣುಮಕ್ಕಳು ಅರವೀಡು ವಂಶದ ಹಿರಿಯ ಬುಕ್ಕರಾಜನು ಪತ್ನಿ ಬಲ್ಲಾಂಬಿಕೆಯಲ್ಲಿ ರಾಮರಾಜನನ್ನು ಪಡೆದು ರಾಮರಾಜನಿಂದ ನಡೆದ ಒಂದು ಕವಲು ಮೇಲಿನದಾದರೆ ಬುಕ್ಕರಾಜನ ಇನ್ನೊಬ್ಬ ಹೆಂಡತಿ ಅಬ್ಬಲದೇವಿಯಿಂದ ಮೂವರು ಮಕ್ಕಳನ್ನು ಪಡೆದಿದ್ದ ಸಿಂಗಾರಯ್ಯ ಅಥವಾ ಶ್ರೀರಂಗರಾಜ, ರಾಮರಾಜ, ಅಹೋಬಿಲರಾಜ ಇವರಿಗೆ ನಂದ್ಯಾಲದ ಒಡೆತನವನ್ನು ನೀಡಿದ ನಂತರ ಇವನ ವಾರಸರು ನಂದ್ಯಾಲ ವಂಶದವರೆಂದೇ ಗುರುತಿಸಲ್ಪಟ್ಟವರಾದರು ಶ್ರೀರಂಗರಾಜನ ಮಗ ನಂದ್ಯಾಲನರಸಿಂಗರಾಜ ಇವನ ಇಬ್ಬರು ಮಕ್ಕಳು ಓಬಳರಾಜ ಮತ್ತು ನರಸರಾಜ ಹೀಗೆ ಅರವೀಡು ಹಾಗೂ ನಂದ್ಯಾಲ ಮನೆತನಗಳು ತಮ್ಮ ಮುಖ್ಯರೊಡನೆ ಒಂದಾಗಿ ಒಂದು ಸುಸಜ್ಜಿತ ಹಾಗೂ ಸುದೃಢ ಶಕ್ತಿಯಾಗಿ, ವಿಜಯನಗರದ ಆಡಳಿತದಲ್ಲಿ ಒಂದು ಶತಮಾನದ ಹಿಂದೆ ಸಾಳುವ ಮನೆತನ ಬಲವಾಗಿ ಮೆರೆದಂತೆಯೇ ಇಡೀ ಸೀಮೆಯಲ್ಲಿ ಅಜೇಯವಾದ ಬಲವಾಗಿದ್ದಿರಬೇಕು

ತಿ ತಿ 633 ರಲ್ಲಿ ಪ್ರತಿನಿಧಿಸಲ್ಪಟ್ಟಿರುವ ತಿರುಮಲರಾಯನು ಅರವೀಟಿ ಬುಕ್ಕರಾಯನ ಮಗನಾಗಿ ಅಳಿಯರಾಮರಾಜನ ತಮ್ಮನಾಗಿದ್ದ ತಿರುಮಲೆಯ ಆಲಯದ ಸಂಪಂಗಿ ಪ್ರದಕ್ಷಿಣೆಯಲ್ಲಿ ಈತನು ಒಂದು ಊಂಜಲ್ ಮಂಟಪವನ್ನು ಕಟ್ಟಿಸಿದ ಆಲಯದ ಧ್ವಜಸ್ತಂಭದ ಪ್ರಾಕಾರದಲ್ಲಿ ಉತ್ಸವ ಸಂದರ್ಭಗಳಲ್ಲಿ ದೇವರ ಮೆರವಣಿಗೆ ಬಂದಾಗ ಬಳಸಲು ಯೋಜಿಸಲಾದ ಉಯ್ಯಾಲೆ ಮಂಟಪ ಈಗ ತಿರುಮಲರಾಯ ಮಂಟಪವೆಂದು ಕರೆಯಲಾಗುವ ಸಂಪಂಗಿ ಪ್ರದಕ್ಷಿಣೆಯಲ್ಲಿ ಧ್ವಜಸ್ತಂಭದ ದಕ್ಷಿಣಕ್ಕೆ ಇರುವ ಮಂಟಪವೇ ಇದಾಗಿರಬೇಕು ಶಕ 1483 ರ ದುರ್ಮತಿ ಸಂವತ್ಸರದ ಧನುಸ್ಸಿನಲ್ಲಿ (15-12-1561) ಈತನು ಸ್ವಾಮಿಯ ಉತ್ಸವ ಮೂರ್ತಿಗಳ ಮೆರವಣಿಗೆಯಲ್ಲಿ ನಿವೇದನಕ್ಕೆಂದು ದಾನ ನೀಡಿದ ಈ ಮೆರವಣಿಗೆಯ ದಿನಗಳೆಂದರೆ ವಸಂತೋತ್ಸವದ ಐದು ದಿನಗಳು, ಸಾಳುವ ನರಸಿಂಹನಿಂದ ಆರಂಭಿಸಲ್ಪಟ್ಟ ಊಂಜಲ್ ತಿರುನಾಳ್ (ಉಯ್ಯಾಲೆ ಉತ್ಸವ) ತಿರುಕ್ಕೊಡಿ ತಿರುನಾಳ್ (ಬ್ರಹ್ಮೋತ್ಸವ) ನ ಹತ್ತು ದಿನಗಳು, ಹದಿನಾಲ್ಕು ಇತರ ಹಬ್ಬದ ದಿನಗಳು ಹಾಗೂ ಅಂದು ಸ್ವಾಮಿಯ ಆಲಯದಲ್ಲಿ ಆಚರಣೆಯಲ್ಲಿದ್ದ ಇತರ ಹಬ್ಬಗಳ ಅವಸರದ ದಿನಗಳು ವಸಂತ ತಿರುನಾಳ್ ಉತ್ಸವದ ಐದುದಿನಗಳಲ್ಲಿ ಉತ್ಸವರನ್ನು ಮೆರವಣಿಗೆ ಮಾಡಲು ಮೊದಲ ದಿನ ಶೇಷವಾಹನ, ಎರಡನೆಯದಿನ ಹಂಸವಾಹನ, ಮೂರನೆಯದಿನ ಗರುಡವಾಹನ ನಾಲ್ಕನೆಯ ದಿನ ವೈಕುಂಠವಾಹನ (ರಥ) ಹಾಗೂ ಐದನೆಯ ದಿನ ಆನ್ಯೆ ನಂಬಿರಾನ್ (ಗಜವಾಹನ) ವಸಂತ ತಿರುನಾಳಿನ ಈ ದಿನಗಳಲ್ಲಿ ಉತ್ಸವ ಮೂರ್ತಿಗಳ ಊಂಜಲ್ ಸೇವೆಗೆ ಹಾಗೂ ನಿವೇದನಕ್ಕೆ ಊಂಜಲ್ ಮಂಟಪವನ್ನು ಬಳಸಲು ಏರ್ಪಾಡು ಮಾಡಿದ್ದನ್ನು ತಿ ತಿ 649, 659 ಎ ಶಾಸನಗಳಲ್ಲಿ ಕಾಣಬಹುದಾಗಿದೆ ತಿರುಮಲರಾಜನ ಡೋಲಮಹೋತ್ಸವದ ಈ ಏರ್ಪಾಡುಗಳು ತಿ ತಿ 190 ಶಾಸನದಲ್ಲಿಯೂ (ಇದು ಮುರಿದು ಹೋಗಿರುವ ಶಾಸನ) ಕಂಡುಬರುವುದು ಇಲ್ಲಿ ಅರವೀಡು ವಂಶದ ಆರಂಭದಿಂದ - ಬುಕ್ಕರಾಜನಿಂದ - ತಿರುಮಲೇಂದ್ರ ಹಾಗೂ ಅವನ ನಾಲ್ಕು ಮಂದಿ ಮಕ್ಕಳವರೆಗಿನ ಪಟ್ಟಿಯನ್ನು ನೋಡಬಹುದು ಬುಕ್ಕರಾಯನಿಗೆ ಬಿರುದೆಂತೆಂಬರ ಗಂಡ ಎಂಬ ಬಿರುದೂ ವರಾಹ ಲಾಂಛನವೂ ಇದ್ದಿತು ಇವನಿಗೆ ವಲ್ಲಮ್ಮಾಜಿಯಿಂದ (ಬಲ್ಲಾಂಬಿಕೆ) ಒಬ್ಬ ಮಗ- ರಾಮರಾಜ - ಇದ್ದನು

ರಾಮರಾಜನ ಮಗ ಶ್ರೀರಂಗರಾಜನು ಜಗತ್ಪ್ರಸಿದ್ಧನಾಗಿ ಜಯಂತನನ್ನು ಹೋಲುತ್ತಿದ್ದನು ಕಲ್ಯಾಣ ಪುರದ ರಾಜನಾದ ಶ್ರೀರಂಗರಾಜನು ಭೂಪಾರಿಜಾತನಾಗಿ ಬ್ರಾಹ್ಮಣರಿಗೆ ತನ್ನ ದಾನಗಳಿಂದ ಹೆಸರಾದನು ತನ್ನ ದಾನಗಳಿಂದಲೂ, ಪ್ರಾರ್ಥನೆಯಿಂದಲೂ ಆತ ಒಬ್ಬ ಅತ್ಯುತ್ತಮ ಪುತ್ರನನ್ನು ಪಡೆದನು ಅರವತ್ನಾಲ್ಕು ಕಲೆಗಳಲ್ಲಿ ಪರಿಣತನಾದ ರಾಮರಾಜ ನಾಮಕ ಈ ಪುತ್ರನನ್ನು ಶೌರ್ಯ, ವಿದ್ಯ, ಸೌಂದರ್ಯ, ಸಾಮ್ರಾಜ್ಯ ಲಕ್ಷ್ಮಿಯರು ವರಿಸಿದ್ದರು ರಾಮರಾಜನಿಗೆ ಚಾಲುಕ್ಯ ನಾರಾಯಣ, ನಾನಾವರ್ಣ ಶ್ರೀ ಮಾಂಡಲಿಕ ಗಂಡ, ರಾಯರಾವುತ ಮಿಂಡ - ಎಂಬಿತ್ಯಾದಿ ಬಿರುದುಗಳಿದ್ದವು. ದಶರಥನ ರಾಣಿ ಕೌಸಲ್ಯೆಯಿದ್ದಂತೆಯೇ ರಾಮರಾಜನ ರಾಣಿ ತಿರುಮಲಾಂಬಿಕೆಯಾಗಿದ್ದಳು ರಾಮರಾಜನ ತಮ್ಮನಾದ ತಿರುಮಲೇಂದ್ರನು ರಾಮನ ತಮ್ಮನಾದ ಲಕ್ಷ್ಮಣನಂತಿದ್ದನು ಈ ರಾಜ ತಿರುಮಲೇಂದ್ರನು ಡೋಲಮಹೋತ್ಸವವನ್ನು ಶಾಸ್ತ್ರಗಳ ಪ್ರಕಾರ ನಡೆಯುವಂತೆ ಏರ್ಪಡಿಸಿದನು ಈತನು ತನ್ನ ರಾಣಿಯಾದ ವೆಂಗಲಾಂಬಳಿಂದ ನಾಲ್ವರು ಪುತ್ರರನ್ನು ಪಡೆದನು - ರಘುನಾಥ (ಇಮ್ಮಡಿ ರಘುನಾಥ) ಈತನ ಸಹೋದರ ಶ್ರೀರಂಗ - ರಾಜ ಇವನ ಸೋದರ ರಾಮರಾಜನು ಮನ್ಮಥನಂತೆ ಸುಂದರನಾಗಿ, ವಿಮರ್ಶಕ ಮನದ ವಿದ್ವಾಂಸನಾಗಿದ್ದ. ಇವನ ಸೋದರ ವೆಂಕಟಾದ್ರಿ.

ತಿರುಮಲೇಂದ್ರನು ಸಕಲ ಸಾಮಂತರನ್ನೂ ತನ್ನ ಅಧೀನಕ್ಕೆ ತೆಗೆದುಕೊಂಡನು ಶ್ರೀ ವೆಂಕಟೇಶ್ವರಸ್ವಾಮಿಗೆ ಡೋಲೋತ್ಸವವನ್ನು ನಡೆಸಲು 17-12-1561 ರಲ್ಲಿ ಎಂದರೆ ಶಕ 1483 ರ ದುರ್ಮತಿ ನಾಮ ಸಂವತ್ಸರದ ಧನುರ್ಮಾಸದ ಶುಕ್ಲ ಏಕಾದಶಿಯಂದು ಏರ್ಪಾಡು ಮಾಡಿದನು. ಈ ದಿನವು 633 ತಿ ತಿ ಯ ತಮಿಳು ಶಾಸನದಲ್ಲಿ ನೀಡಿರುವುದಕ್ಕಿಂತ ಎರಡು ದಿನ ನಂತರದ್ದು ಶಾಸನದ ಕೊನೆಯ ತೆಲುಗು ಭಾಷೆಯ ಉಲ್ಲೇಖವು ತಿರುಮಲರಾಜಯ್ಯನ ವಂಶಾವಳಿಯನ್ನೂ ಅವನ ಸೈನಿಕ ವಿಜಯಗಳನ್ನೂ ತುಲುಕನಂ ಆಲಿಯ ಎಂದರೆ ತುರ್ಕಿಯ ಸೇನಾಪತಿಯ ಮೇಲೆ ಯುದ್ಧಮಾಡಿ ಜಯಿಸಿ ಪಡೆದ ಬಿರುದಾವಳಿಯ ವಿವರ ನೀಡುವುದು. ಶಾಸನದಲ್ಲಿ ಅರವೀಡು ವಂಶದ ತಿರುಮಲ ಹಾಗೂ ಅವನ ಎರಡನೆಯ ಮಗ ಶ್ರೀರಂಗರಿಗೆ ಮಾತ್ರವೇ ರಾಜ ಗೌರವವನ್ನು ನೀಡಲಾಗಿರುವುದು ಗಮನಾರ್ಹ. ಸದಾಶಿವರಾಯನ ಮರಣಾನಂತರ ಇವರು ಈ ಗೌರವಕ್ಕೆ ಪಾತ್ರರಾಗಿದ್ದರೂ ಸಹ, ರಾಮರಾಜನು ಬದುಕಿರುವಾಗ ಶಕ 1483 ರಲ್ಲಿ (1561) ರಕ್ಕಸತಂಗಡಿಯುದ್ಧಕ್ಕೆ ನಾಲ್ಕು ವರ್ಷ ಮೊದಲು ಸದಾಶಿವರಾಯನ ಜೀವಿತ ಕಾಲದಲ್ಲಿ ಇವರು ರಾಜರಾಗಿದ್ದರೇ ಎಂಬುದು ಸಂದೇಹಾಸ್ಪದ. ಈ ಯುದ್ಧದಲ್ಲಿ ಅಳಿಯ ರಾಮರಾಯನ ಮರಣಾನಂತರವೇ ಅವನ ತಮ್ಮನಾದ ತಿರುಮಲನು ಸದಾಶಿವರಾಯನ ಪ್ರಧಾನಮಂತ್ರಿಯ ಪದವಿಗೇರಿ ಶಕ ವರ್ಷ 1497 (1575) ರ ಸುಮಾರಿಗೆ ವಿಜಯನಗರ ಸಿಂಹಾಸನವನ್ನೇರಿದ. ಸದಾಶಿವರಾಯನ ಬಗ್ಗೆ ಅತಿ ಈಚಿನ ಕಾಲ ಸೂಚನೆಯೂ ಇದೇ ಆಗಿದೆ. (ಸಂ - 5 - 1919) ತಿರುಮಲನ ಆಡಳಿತಕಾಲವುಬಹು ಕಿರಿದಾಗಿದ್ದು ಈ ಸಮಯದಲ್ಲಿ ಆತ ತನ್ನ ಮಗ ಶ್ರೀರಂಗನನ್ನು ತನ್ನೊಡನೆ ಕೂಡಿಸಿಕೊಂಡು ಆಳ್ವಿಕೆ ನಡೆಸಿದ್ದು ಕಡೆಗೆ ಸಿಂಹಾ

ಶಾಸನವನ್ನು ಅವನಿಗೇ ಬಿಟ್ಟುಕೊಟ್ಟಿದ್ದು ಕಂಡುಬರುತ್ತದೆ. ಶ್ರೀರಂಗನು ಶಕವರ್ಷ 1507 ರ ಪಾರ್ಥಿವದ ವರೆಗೆ (ಕ್ರಿ.ಶ. 1585-86) ಆಳಿ ತನ್ನ ಕಿರಿಯ ತಮ್ಮ ವೆಂಕಟಾದ್ರಿಯಿಂದ ಅನುಸರಿಸಲ್ಪಟ್ಟನು

## ಅರವೀಡು ರಾಜರ ಕಾಲದ ತಿರುಮಲೆ

ಸದಾಶಿವರಾಯನ ಪ್ರಧಾನ ಮಂತ್ರಿಯಾಗಿ ಕ್ರಿ.ಶ. 1570 ರಲ್ಲಿ ಸಿಂಹಾಸನದ ಬಳಿ ಸೇರಿದ ತಿರುಮಲ ರಾಯನಿಂದ ಅರವೀಡು ವಂಶದ ಆಡಳಿತ ಆರಂಭವಾಯಿತು ಈ ಹೊತ್ತಿಗೆ ಇವನ ಅಣ್ಣ ಅಳಿಯ ರಾಮರಾಯನು ತಾಳಿಕೋಟೆ ಅಥವಾ ರಕ್ಕಸ ತಂಗಡಿ ಯುದ್ಧದಲ್ಲಿ ಮರಣ ಹೊಂದಿದ್ದನು. ಈ ನಡುವೆ ಪೆನುಗೊಂಡೆಗೆ ರಾಜಧಾನಿಯನ್ನು ವರ್ಗಾಯಿಸಿದ ನಂತರ ತಿರುಮಲರಾಯನು ಕ್ರಿಶ 1575 ಹೊತ್ತಿಗೆ ವಿಜಯನಗರ ಸಿಂಹಾಸನವನ್ನು ಆರೋಹಣ ಮಾಡಿದನು. ಈತನ ರಾಜ್ಯಾಡಳಿತದ ಅವಧಿ ಅತಿ ಕಿರಿದಾಗಿದ್ದು ಎರಡು ಮೂರು ವರ್ಷ ಮಾತ್ರವೇ ಆಗಿದ್ದು ಇವನ ಎರಡನೆಯ ಮಗ ಶ್ರೀರಂಗರಾಯನು ಅಥವಾ ಇಮ್ಮಡಿರಂಗನು ಇವನೊಡನೆ ಆಡಳಿತವನ್ನು ಹಂಚಿಕೊಂಡಿದ್ದ. ಇವನ ಕಾಲದಲ್ಲಿ ನಿರ್ಮಿತವಾದ ತಿರುಮಲರಾಯ ಮಂಟಪವೆಂದು ಪ್ರಸಿದ್ಧವಾಗಿರುವ ಎತ್ತರದ ಕಂಭಗಳಲ್ಲಿ ಆನೆಯನ್ನೇರಿದ ಯೋಧರ ಶಿಲ್ಪಗಳನ್ನು ಹೊಂದಿದ್ದು ಇಂದಿಗೂ ಪ್ರಶಸ್ತವಾಗಿದ್ದು ಸ್ವಾಮಿಯ ಬ್ರಹ್ಮೋತ್ಸವದ ದಿನಗಳಲ್ಲಿ ಉತ್ಸವ ವಿಗ್ರಹಗಳನ್ನು ಇಲ್ಲಿಗೆ ತಂದು ಆಸ್ಥಾನವನ್ನು ನಿರ್ವಹಿಸಲಾಗುತ್ತದೆ.

ನಂತರದ ಆಡಳಿತವೆಂದರೆ ಶ್ರೀರಂಗದೇವ ಮಹಾರಾಯನದು. ಇದು ಶಕ 1501 ರಿಂದ (1579) ಶಕ 1508 ರ ವರೆಗೆ (1586) ಸುಮಾರು ಆರು ಶಾಸನಗಳಲ್ಲಿ ದಾಖಲೆಯಾಗಿದೆ.

ವೆಂಕಟಪತಿರಾಯನು ಸಾಮಾನ್ಯವಾಗಿ ಒಂದನೇ ವೆಂಕಟ ಎಂದು ಗುರುತಿಸಲ್ಪಟ್ಟು ಶಕ 1514 ರಿಂದ (1592) ಶಕ 1538 ರ ವರೆಗೆ (1616) ಸುಮಾರು ಹನ್ನೆರಡು ಶಾಸನಗಳಲ್ಲಿ ದಾಖಲೆಯಾಗಿದ್ದಾನೆ ಈತ ತಿರುಮಲನ ನಾಲ್ಕನೆಯ ಮಗ ಹಾಗೂ ಇಮ್ಮಡಿ ಶ್ರೀರಂಗನ ತಮ್ಮ ತಮ್ಮ ಪ್ರಕಾಶಂ ಜಿಲ್ಲೆಯ ಮಾರ್ಕಾಪುರದ ಒಂದು ಶಾಸನದಂತೆ ಈತ ಶಕವರ್ಷ 1489 ರಲ್ಲಿ (1567) ಸದಾಶಿವರಾಯನ ಕೈಕೆಳಗೆ ಕೆಲಸ ಮಾಡಿದಂತೆ ತೋರುತ್ತದೆ ಸೇಲಂ ಹಾಗೂ ಉತ್ತರ ಆರ್ಕಾಟುಗಳಲ್ಲಿ ಕಂಡುಬರುವ ಎರಡು ಶಾಸನಗಳ ಪ್ರಕಾರ ಇವನನ್ನು ಅವನ ಬಿರುದು - ವೀರ ವಸಂತರಾಯ - ಎಂಬುದಾಗಿ ಮಾತ್ರವೇ ಸಂಬೋಧಿಸಲಾಗಿದೆ. ತನ್ನ ತಂದೆ ತಿರುಮಲ ಹಾಗೂ ಅಣ್ಣ ಶ್ರೀರಂಗದೇವರುಗಳ ಕಾಲದಲ್ಲಿ ಈತ ಚಂದ್ರಗಿರಿ ರಾಜ್ಯದ ರಾಜ್ಯಪಾಲನಾಗಿದ್ದನೆಂದು 'ವಸುಚರಿತ್ರಮು' - ತೆಲುಗು ಕಾವ್ಯ ಗುರುತಿಸುತ್ತದೆ. (ಒಂದನೇ ಅಧ್ಯಾಯ ಪೀಠಿಕಾ ಸಂಧಿ ಪದ್ಯ 81) ಶಕ ವರ್ಷ 1494 ರ ಆಂಗೀರಸ ಸಂವತ್ಸರದ ಆಷಾಢಮಾಸದ 9-7-1572 ಶಾಸನವೂ (182 - 1922) ಇದನ್ನು ಗುರುತಿಸಿದೆ. ನಂತರ ಶ್ರೀರಂಗರಾಯನ ಕಾಲದಲ್ಲಿ ಉದಯಗಿರಿ, ಕೊಂಡ ವೀಡು ಮೊದಲಾದ ಪರ್ವತಗಡಿ ಪ್ರದೇಶಗಳನ್ನು ಆಳಿದನೆಂದು ತೋರುತ್ತದೆ. ಈತ ಐವರನ್ನು ವಿವಾಹವಾಗಿದ್ದ. ಅವರಲ್ಲಿ ತಿ.ತಿ. 97 ರಲ್ಲಿ ಉಲ್ಲೇಖವಾಗಿರುವ ಒಬ್ಬಾಕೆ ಕೃಷ್ಣಮಾಂಬ ಅಥವಾ ಕೃಷ್ಣಾಜಿಯಮ್ಮ ಈತನ ಆಡಳಿತ ಸಮಯದಲ್ಲಿ ಇವನ ಅಣ್ಣ ಮುಮ್ಮಡಿ ರಾಮನ ಮಗ ಮುಮ್ಮಡಿ ರಂಗನೂ, ಮುಮ್ಮಡಿ ರಂಗನ ಮಗ ನಾಲ್ಕನೆಯ ರಾಮನೂ ಈತನೊಡನೆ ಆಡಳಿತ ನಡೆಸಿದರು

ಒಂದನೇ ವೆಂಕಟನ ಅಣ್ಣನಾದ ಮೂರನೇ ರಾಮನ ಮಗ ಮುಮ್ಮಡಿರಂಗನ ಮಗನೇ ರಾಮರಾಯನೆಂದು ಹೆಸರಾದ ನಾಲ್ಮಡಿರಾಮ ಒಂದನೇ ವೆಂಕಟನ ಆಳ್ವಿಕೆಯಲ್ಲಿ ಆಡಳಿತವನ್ನು ಹಂಚಿಕೊಂಡ ನಾಲ್ಮಡಿರಾಮ ಶಕ ವರ್ಷ 1536-37 ರ ಆನಂದ ಸಂವತ್ಸರದಲ್ಲಿ (ಕ್ರಿಶ 1614) ಸಿಂಹಾಸನವನ್ನೇರಿದ. ಒಂದೇ ಒಂದು ಶಾಸನವು - ಶಕ 1549 ರ ಪ್ರಭವ ವರ್ಷದ ವೃಷಭ ಮಾಸದ್ದು - ಇವನ ಆಳ್ವಿಕೆಯನ್ನು ಗುರುತಿಸಿದೆ (25-5-1627)

ಈ ಕಾಲಕ್ಕೆ ಭಾನುವಂಶಕ್ಕೆ ಸೇರಿದ ದೇವಚೋಡ ಕುಲದ ಮಟ್ಲ ತಿರುವೆಂಗಳ ನಾಥರಾಜ ಹಾಗೂ ಚೆನ್ನಮಾಂಬರ ಮಗ ಮಟ್ಲ ಕುಮಾರ ಅನಂತರಾಜನು ಕಂಡುಬರುತ್ತಾನೆ ದೇವ ಚೋಡ ಕುಲದ ಈ ರಾಜವಂಶಕ್ಕೆ ಅವರು ಇದ್ದ ಮಟ್ಲ ಗ್ರಾಮವು - ಕಡಪ ಜಿಲ್ಲೆ - ರಾಯಚೋಟಿಯ ಸಮೀಪದಲ್ಲಿದ್ದದ್ದು - ತನ್ನ ಹೆಸರನ್ನು ನೀಡಿತು ಇವರ ರಾಜ್ಯವು ಕಡಪ ಜಿಲ್ಲೆಯ ಪೂರ್ವಭಾಗದಲ್ಲಿ ಬದ್ವೇಲು, ಸಿದ್ಧವಟ, ಕಡಪ, ಪುಲ್ಲಂಪೇಟೆ ಅಥವಾ ರಾಜಂಪೇಟೆ ತಾಲ್ಲೂಕುಗಳಲ್ಲಿ ಹರಡಿದ್ದಿತು ರಾಜಂಪೇಟೆಯ ಅನಂತ ರಾಜ ಪೇಟೆಯು ರಾಜಧಾನಿಯಾಗಿದ್ದು ಇಡೀ ಪ್ರಾಂತ್ಯ ಮಟ್ಲವಾರಿ ಸೀಮೆ ಎಂದು ಹೆಸರು ಪಡೆದಿದ್ದಿತು ಮಟ್ಲ ಕುಮಾರ ಅನಂತರಾಜನು ತಿರುವೆಂಗಳನಾಥ ರಾಜನ ಮಗನಾಗಿದ್ದು, ಕಾಕುಸ್ಥ ವಿಜಯಮು ಕಾವ್ಯವನ್ನು ಬರೆದ ಕವಿ, ರಾಜ, ಅನಂತರಾಜನು ತಿರುವೆಂಗಳನಾಥನ ತಂದೆಯಾಗಿದ್ದನು

ಕುಮಾರ ಅನಂತರಾಜನು ಶ್ರೀ ಗೋವಿಂದರಾಜಸ್ವಾಮಿಯ ಹೊರಗೋಪುರ. (ಜಿ. ಟಿ. 281) ಅಲಿಪಿರಿಯಲ್ಲಿನ ಎರಡನೆಯ ಗೋಪುರ- ಈಗ ಕೊತ್ತಗೋಪುರಂ ಎಂದು ಕರೆಯಲಾಗುವ ಈ ಗೋಪುರದ ಮೂಲಕ ಮೆಟ್ಟಿಲ ಹಾದಿಯು ನಡೆಯುತ್ತದೆ. (ಜಿ.ಟಿ. 279, 280) ಮೊದಲೆರಡು ಗೋಪುರಗಳೂ ಒಳಭಾಗದಲ್ಲಿ ಶಾಸನಗಳನ್ನು ಹೊಂದಿದ್ದು ಇವುಗಳನ್ನು ತಿರುವೆಂಗಳನಾಥ ರಾಜಯ್ಯ ದೇವಚೋಡ ಮಹಾರಾಜುಲಯ್ಯನ ಮಗ ಮಟ್ಲ ಕುಮಾರ ಅನಂತರಾಜಯ್ಯನು ಕಟ್ಟಿಸಿದನೆಂದು ದಾಖಲೆ ಮಾಡುತ್ತಿವೆ.

ಕುಮಾರ ವೆಂಕಟಪತಿರಾಯದೇವ ಮಹಾರಾಯನು ಎರಡೂ ಶಾಸನಗಳಲ್ಲಿ (ಜಿ. ಟಿ. 63 ಹಾಗೂ 328) ಪ್ರತಿನಿಧಿಸಲ್ಪಟ್ಟಿದ್ದು ಇವು ಶಕ ವರ್ಷ 1553 ಹಾಗೂ 1557 ಕ್ಕೆ ಸೇರಿದವುಗಳಾಗಿವೆ. ಅಳಿಯರಾಮರಾಜನ ಮಗನಾದ ನಾಲ್ಕನೇ ರಂಗನ ಮಗನೇ ಪೆದ್ದ ವೆಂಕಟ ಎಂದೂ ಕರೆಯಲ್ಪಡುವ ಈ ಕುಮಾರ ವೆಂಕಟ. (ಪೆದ್ದ ಎಂದರೆ ತೆಲುಗಿನಲ್ಲಿ ದೊಡ್ಡ ಎಂದರ್ಥ) ಈತನನ್ನು ಶಕ 1552 ರಲ್ಲಿ ತಿರುಮಲ ತಾತಾಚಾರ್ಯರು ಪಟ್ಟಾಭಿಷಿಕ್ತನನ್ನಾಗಿಸಿದರು.

(ಮುಂದುವರೆಯುವುದು)



# ವೇದ ಸಮ್ಮೇಳನ - 1999

ಧರ್ಮಗಿರಿಯ ವೇದಾಗಮ ಪಾಠಶಾಲೆಯ ಶತಾಬ್ದಿ ಉತ್ಸವಗಳ ಸಂದರ್ಭದಲ್ಲಿ 5-7-99 ರಿಂದ 8-7-99 ವರೆಗೆ ತಿರುಮಲೆಯ ಧರ್ಮಗಿರಿ ಹಾಗೂ ತಿರುಮಲೆಯ ಆಸ್ಥಾನ ಮಂಟಪದಲ್ಲಿ ವೇದಾಗಮ ಶಿಲ್ಪ ಸಮ್ಮೇಳನ ನಡೆಯಿತು

ಧರ್ಮಗಿರಿಯ ಶಾಲೆಯ ಆವರಣದಲ್ಲಿ 5-7-99 ರಂದು ಶತಮಾನೋತ್ಸವವು ಕಂಚಿಕಾಮಕೋಟಿ ಪೀಠಾಧಿಪತಿ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಜೀ ಅವರ ಸನ್ನಿಧಿಯಲ್ಲಿ ಉದ್ಘಾಟಿತವಾಯಿತು ತಿ.ತಿ.ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ.ವಿ ಸುಬ್ಬಾರಾವ್ ಅವರು ತತ್ಸಂದರ್ಭದಲ್ಲಿ ವೇದಶಾಸ್ತ್ರ ವಿದ್ವಾಂಸರನ್ನೂ ಸಾರ್ವಜನಿಕರನ್ನೂ ಸ್ವಾಗತಿಸುತ್ತ, 1884 ರಲ್ಲಿ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಗುಡಿಯ ಆವರಣದಲ್ಲಿ ವೇದಾಗಮ ಪಾಠಶಾಲೆ ಆರಂಭವಾಯಿತೆಂದೂ ಅದು ಕಾಲಾಂತರದಲ್ಲಿ ಧರ್ಮಗಿರಿಗೆ ಸ್ವಂತ ಕಟ್ಟಡಗಳ ಶಾಲಾಸಮುದಾಯಕ್ಕೆ ವರ್ಗಾವಣೆ ಹೊಂದಿದ ಕೇಂದ್ರ ಪಾಠಶಾಲೆಯಾಗಿ, ಕೀಸರ ಗುಟ್ಟದಲ್ಲಿನ ಹಾಗೂ ಹೈದರಾಬಾದಿನ ಶಾಖಾಶಾಲೆಗಳನ್ನು ಹೊಂದಿ ಬೆಳೆಯಿತೆಂದೂ ವಿವರಿಸಿದರು. ವೇದಗಳ ವಿಸ್ತೃತ ಪ್ರಚಾರಕ್ಕೆ ಶ್ವೇತ ವೇದ ವಿಜ್ಞಾನ ಸಂಸ್ಥೆಯೂ ಆಗಿ ಬೆಳೆದಿದೆ ಎಂದು ತಿಳಿಸಿದರು. ನಂತರ ಪಾಠಶಾಲೆಯ ಪ್ರಾಂಶುಪಾಲ ಶ್ರೀ ಶ್ರೀನಿವಾಸಾಚಾರ್ಯರು ಶಾಲೆಯ ನೂರು ವರ್ಷಗಳ ಇತಿಹಾಸವನ್ನು ಗುರುತಿಸುವ ಶತಮಾನದ ವರದಿಯನ್ನು ಓದಿದರು. ಅಧ್ಯಕ್ಷ ಭಾಷಣದಲ್ಲಿ ತಿ.ತಿ.ದೇ. ಅಧ್ಯಕ್ಷರಾದ ಶ್ರೀ ಕಾಗಿತ ವೆಂಕಟ್ರಾವು ಅವರು ವೇದಗಳ ಪ್ರಸಾರದಲ್ಲಿ ತಿ.ತಿ.ದೇ ವಿವಿಧ ಯೋಜನೆಗಳ ಮೂಲಕ ವ್ಯಾಪಕವಾದ ಕೆಲಸಗಳನ್ನು ಕೈಗೆತ್ತಿಕೊಂಡಿವೆಯೆಂದು ವಿವರಿಸಿದರು ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಾರ್ಯದರ್ಶಿ ಶ್ರೀ ಜೆ. ರಾಮಬಾಬು ಅವರು ದೀಪವನ್ನು ಬೆಳಗಿಸಿ ಶತಜಯಂತಿ ಉತ್ಸವಗಳನ್ನು ಉದ್ಘಾಟಿಸಿದರು. ಆಂಧ್ರಪ್ರದೇಶದ ಮುಜರಾಯಿ ಇಲಾಖಾ



ವೇದ ಶಿಲ್ಪಿ ಆಗಮ ಸಮ್ಮೇಳನವನ್ನು ಅನುಗ್ರಹಿಸಿದ
ಕಂಚಿ ಪೀಠದ ಶ್ರೀ ಶ್ರೀ ವಿಜಯೇಂದ್ರಸರಸ್ವತಿ ಸ್ವಾಮಿಜೀ
ಹಾಗೂ ಶ್ರೀ ಜಯೇಂದ್ರಸರಸ್ವತಿ ಸ್ವಾಮಿಜೀ ಕಾರ್ಯನಿರ್ವಹಣಾಧಿಕಾರಿಯೊಂದಿಗೆ



ಶ್ರುತಿ ವೈಜಯಂತಿ ಬಿಡುಗಡೆ ಮಾಡುತ್ತ ಮಂತ್ರಿವರ್ಯ ಶ್ರೀ ಡಿ. ಆಂಜನೇಯುಲು
ಅವರ ಜೊತೆಯಲ್ಲಿ ಡಾ|| ಐ. ವಿ. ಸುಬ್ಬಾರಾವು ಹಾಗೂ ಶ್ರೀ ಕಾಗಿತ ವೆಂಕಟ್ರಾವು



ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಾರ್ಯದರ್ಶಿ ಶ್ರೀ ಜ ರಾಮಬಾಬು
ಕಂಚಿಯ ಹಿರಿಯ ಸ್ವಾಮಿಜೀಯವರೂಡನ



ಶಿಲ್ಪದರ್ಶನ ಪುಸ್ತಕದ ಬಿಡುಗಡೆಯಲ್ಲಿ ಶ್ರೀ ಶ್ರೀ ವಿಜಯೇಂದ್ರಸರಸ್ವತೀ ಸ್ವಾಮಿ

ಮಂತ್ರಿ ಶ್ರೀ ಡಿ ಆಂಜನೇಯುಲು ಅವರು ಶತ ಮಾನೋತ್ಸವದ ನೆನಪಿನ ಸಂಚಿಕೆ 'ಶ್ರುತಿ ಪ್ರೇಷಯಂತಿ' ಯನ್ನೂ ವೇದಾಗಮ ಶಾಸ್ತ್ರ ಸಾಹಿತ್ಯವನ್ನ ಕೃಷಿ ಮಾಡಿದ ೨೧ ಮಂದಿ ಮಹರ್ಷಿಗಳ ಕಥೆಗಳನ್ನು ತಿಳಿಸುವ ವೇದಕಥಾಭಾರತಿ (ತೆಲುಗು) ಪುಸ್ತಕಗಳನ್ನೂ ಬಿಡುಗಡೆ ಮಾಡಿದರು

ಕಂಚಿಯ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು ಅನುಗ್ರಹ ಭಾಷಣಮಾಡಿದರು

ಧರ್ಮಗಿರಿಯ ಈ ಆರಂಭ ದಿನದ ಶತಮಾನೋತ್ಸವ ಕಾರ್ಯಕ್ರಮವನ್ನು ವೇದ ವಿಜ್ಞಾನ ಸಂಸ್ಥೆಯ ಮಹಾ ನಿರ್ದೇಶಕ ಡಾ|| ಎಸ್ ಬಿ ರಘುನಾಥಾಚಾರ್ಯರು ನಿರ್ವಹಿಸಿದರು

## ಮೊದಲನೆಯ ದಿನ 5-7-99

ತಿರುಮಲೆಯ ಆಸ್ಥಾನ ಮಂಟಪದಲ್ಲಿ 5-7-99 ರಂದು ಮಧ್ಯಾಹ್ನ ಕಂಚಿ ಕಾಮಕೋಟಿ ಪೀಠದ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಹಾಗೂ ಶ್ರೀ ಶ್ರೀ ಶಂಕರ ವಿಜಯೇಂದ್ರ ಸರಸ್ವತಿ ಸ್ವಾಮಿಜೀ ಅವರ ಸನ್ನಿಧಿಯಲ್ಲಿ ವೇದಾಗಮ ಶಿಲ್ಪ ಶಾಸ್ತ್ರ ಸಮ್ಮೇಳನ ಆರಂಭವಾಯಿತು

ಮದರಾಸು ವಿ ವಿ ಯ ಪ್ರಾಚಾರ್ಯ ಎಂ. ನರಸಿಂಹಾಚಾರ್ಯರು ಆಧುನಿಕ ಪ್ರಪಂಚದಲ್ಲಿ ವೇದಗಳ ಸಾಂಗತ್ಯವನ್ನು ಕುರಿತು ಮಾತನಾಡುತ್ತ ಲೌಕಿಕ ವಿಷಯಗಳನ್ನೂ, ಮುಕ್ತಿ ವಿಷಯವನ್ನೂ ಒಳಗೊಂಡ ವೇದಗಳಲ್ಲಿ ಎಲ್ಲ ಶಕ್ತಿಗಳ ಕ್ರೋಢೀಕರಣ ಆಗಿದೆ ಎಂದು ವಿವರಿಸಿದರು

ನಂತರ ತಿರುಪತಿಯ ಕೇಂದ್ರೀಯ ಸಂಸ್ಕೃತ ವಿದ್ಯಾಲಯದ ಮಾಜಿ ಉಪಕುಲಪತಿ ಶ್ರೀ ರಾಮಾನುಜ ತಾತಾಚಾರ್ಯರು ಮಾತನಾಡುತ್ತ ಭೌತಿಕ ಪ್ರಪಂಚವನ್ನು ನೋಡಲು ಭೌತಿಕವಾದ ಕಣ್ಣುಗಳ ಅಗತ್ಯವಿದ್ದಂತೆ ಆಧ್ಯಾತ್ಮಿಕ ಪ್ರಪಂಚವನ್ನು ಕಾಣಲು ವೇದಗಳ ಕಣ್ಣುಗಳು ಇರಬೇಕು ಎಂದು ವಿವರಿಸಿದರು

ಶ್ರೀ ಸುಬ್ರಹ್ಮಣ್ಯ ಘನಪಾಠಿಗಳು ವೇದೋಪಾಸನೆಯಿಂದ ಪ್ರಕೃತಿ ಉಪಾಸನೆ ಸಾಧ್ಯವೆಂದು ವೇದ ಮಂತ್ರಗಳನ್ನು ಸೋದಾಹರಣವಾಗಿ ಉದಹರಿಸುತ್ತ ಮಾತನಾಡಿದರು

ಕುಂಭಕೋಣದ ಶ್ರೀ ಪಂಚಾಪಕೇಶ ಶಾಸ್ತ್ರಿಗಳು ವೇದಗಳಲ್ಲಿನ ಯಜ್ಞಭಾಗದ ಹಿರಿಮೆ ಗರಿಮೆ ಮಹತ್ವಗಳನ್ನು ವಿವರಿಸಿದರು

ದೆಹಲಿಯ ಶ್ರೀ ರಾಮಚಂದ್ರನ್ ಅವರು ಮತ್ತೆ ವೇದಗಳತ್ತ ತಿರುಗಿ ನೋಡುವ, ಪುನಃ ಕೂಲಂಕಷ ಅಧ್ಯಯನ ಮಾಡುವ ಅಗತ್ಯ ೨೧ ನೇ ಶತಮಾನದಲ್ಲಿ ಅತ್ಯಗತ್ಯವಾಗುವುದೆಂದರು.

ಶ್ರೀ ಆರ್ ಸೂರ್ಯಪ್ರಕಾಶ ಶಾಸ್ತ್ರಿಗಳು ಇಡೀ ಸಮಾವೇಶದ ಕಲಾಪಗಳನ್ನು ಸಮೀಕ್ಷಿಸಿ, ವೇದಗಳ ಪ್ರಾಶಸ್ತ್ಯವನ್ನು ತಿಳಿಸಿದರು.

ಕಂಚಿಯ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಜೀ ಅವರು ಮಾತನಾಡುತ್ತ ದೇವಭಾಷೆಯೆಂದರೆ ದೇವರು ಮಾತನಾಡುವ ಭಾಷೆ ಎಂದಾಗದೆ ದೇವರ ಬಗ್ಗೆ ತಿಳಿಯುವ ಭಾಷೆಯೆಂದು ವಿವರಿಸುತ್ತ ಸಂಸ್ಕೃತದ ಮಹತ್ವವನ್ನು ವಿವರಿಸಿದರು.

ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ಉಪಕುಲಪತಿ ಶ್ರೀ ವಿ. ಆರ್. ಪಂಚಮುಖಿಯವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ವೇದಪ್ರಸಾರದ ಅಗತ್ಯವನ್ನು ವಿವರಿಸಿದರು.

## ಎರಡನೆಯ ದಿನ 6-7-99

6-7-99 ರಂದು ಬೆಳಗ್ಗೆ ಚತುರ್ವೇದ ಪಾರಾಯಣ ಕಾರ್ಯಕ್ರಮ ಆದ ನಂತರ ವೇದಗಳು ವಿಜ್ಞಾನಶಾಸ್ತ್ರ ವಿಚಾರಗೋಷ್ಠಿ ನಡೆಯಿತು. ಕುಪ್ಪಂ ನ ದ್ರಾವಿಡ ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ|| ಪಿ. ವಿ. ಅರುಣಾಚಲಂ ಅವರು ಮಾತನಾಡುತ್ತ ವೇದಗಳಲ್ಲಿನ ಅರ್ಥಶಾಸ್ತ್ರ, ಗಣಿತ ಶಾಸ್ತ್ರ ಮೊದಲಾದ ವಿಷಯಗಳು ವ್ಯಾಸಂಗವಸ್ತುವಾಗಿ ಹರಡಬೇಕಾದ ಅಗತ್ಯವಿದೆಯೆಂದು ವಿವರಿಸಿದರು. ಪ್ರಾಚಾರ್ಯ ಇ.ಎ.ವಿ. ಪ್ರಸಾದರು ಆಧುನಿಕ ವಿಜ್ಞಾನ ಕ್ಷೇತ್ರದಲ್ಲಿ ವರಾಹಮಿಹಿರನ ಸ್ಥಾನವನ್ನು ಗುರುತಿಸಿದರು. ಕೊಯಮತ್ತೂರಿನ ಶ್ರೀ ಶ್ರೀ ತತ್ವವಿದಾನಂದ ಸ್ವಾಮಿಗಳು ವೇದಗಳಲ್ಲಿನ ಶಾಸ್ತ್ರ ವಿಷಯಗಳನ್ನು ವಿವರಿಸಿದರೆ, ಪ್ರಾಚಾರ್ಯ ಎಸ್. ಲಕ್ಷ್ಮಣಮೂರ್ತಿ ಅವರು ವೇದಗಳಲ್ಲಿ ಶಾಸ್ತ್ರ ವಿಷಯ ಸೀಮೆಗಳನ್ನು ಗುರುತಿಸಿದರು ಪ್ರಾಚಾರ್ಯ ಎಸ್. ಸುದರ್ಶನ ಶರ್ಮ ತೈತ್ತಿರೀಯ ಸಂಹಿತೆಯ ವೃಕ್ಷಶಾಸ್ತ್ರವನ್ನು ಕುರಿತು ಮಾತನಾಡಿದರು ಡಾ|| ವೆಂಕಟೇಶ ಮೂರ್ತಿಯವರು ಸುಲಭ ಸೂತ್ರ ಪದ್ಧತಿಯಲ್ಲಿ ಗಣಿತ ಶಾಸ್ತ್ರವನ್ನು ವಿವರಿಸಿದರು.

ಸನ್ನಿಧಾನಂ ಲಕ್ಷ್ಮೀನಾರಾಯಣಮೂರ್ತಿ ಇಡೀ ಕಾರ್ಯಕ್ರಮದ ವಿಚಾರ ವಿನಿಮಯವನ್ನು



ಆಲಯಕ್ಕೆ ಕಂಚಿ ಶ್ರೀಯವರ ಆಗಮನ. ಸ್ವಾಮಿಯ ಶಿರಾರಿಯೊಡನ ಸ್ವಾಗಂತಿಸುತ್ತ ತಿ.ತಿ.ದೇ. ಆಸ್ಥಾನ ವಿದ್ವಾಂಸ ಶ್ರೀ ಮಾಡಂಬಾಕಂ ಶ್ರೀನಿವಾಸ ಬಟ್ಟಾಚಾರ್ಯ



ಒಂದು ವಿದ್ವದ್ಗೋಷ್ಠಿ



ಕ್ರೋಢೀಕರಿಸಿ ಸಮೀಕ್ಷಿಸಿದರು ಅಧ್ಯಕ್ಷತೆ ವಹಿಸಿದ್ದ ಕೇಂದ್ರೀಯ ವಿದ್ಯಾಪೀಠದ ಮಾಜಿ ಉಪಕುಲಪತಿ ಪ್ರಾಚಾರ್ಯ ರಮಾರಂಜನ್ ಮುಖರ್ಜಿ ಅವರು ವೇದಗಳಿಗೆ ಭಾಷ್ಯಗಳು ಬಂದ ಬಗೆಯನ್ನು ವಿವರಿಸಿ ಸಾಯಣಾಚಾರ್ಯರಿಂದ ಅರವಿಂದರ ವರೆಗಿನ ಇತಿಹಾಸವನ್ನು ಗುರುತಿಸಿದರು

ಅಂದು ಮಧ್ಯಾಹ್ನ ಆಚಾರ್ಯ ಮಂಡನ ಮಿಶ್ರರ ಅಧ್ಯಕ್ಷತೆಯಲ್ಲಿ ವೇದಗಳು - ವಿಶ್ವಶಾಂತಿಯ ಬಗ್ಗೆ ವಿಚಾರಗೋಷ್ಠಿ ಆಚಾರ್ಯ ಕುಟುಂಬಶಾಸ್ತ್ರಿಗಳು ಸಮಾಜ ಸಂಕ್ಷೇಮದಲ್ಲಿ ವೈದಿಕ ಕ್ರಿಯೆಗಳ ಪಾತ್ರಗಳನ್ನು ವಿವರಿಸಿದರೆ, ಸಿ ಎಚ್ ಶ್ರೀರಾಮಶರ್ಮರು ವೇದಗಳಲ್ಲಿನ ಯೋಗಕ್ಷೇಮವನ್ನು ಕುರಿತು ಮಾತನಾಡಿದರು ಶ್ರೀ ಡಿ ಅಗ್ನಿಹೋತ್ರ ಯಾಜಿಗಳು ಕಾರ್ಯಕ್ರಮ ಸಾರವನ್ನು ಸಮೀಕ್ಷಿಸಿದರು ಶ್ರೀಮಂಡನ ಮಿಶ್ರರು ತಮ್ಮ ಅಧ್ಯಕ್ಷೋಪನ್ಯಾಸದಲ್ಲಿ ವೇದಗಳ ಅಸ್ತಿತ್ವವೇ ವಿಶ್ವಕ್ಷೇಮಕ್ಕಾಗಿ ಎಂದು ವಿವರಿಸಿದರು ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು ಅನುಗ್ರಹ ಭಾಷಣ ಮಾಡಿದರು

ಎರಡು ಗೋಷ್ಠಿಗಳಲ್ಲಿ ವಿಷಯ ಮಂಡನೆ

## ಮೂರನೆಯ ದಿನ - 7-7-99

ಮೂರನೆಯ ದಿನ 7-7-99 ರಂದು ಬೆಳಗ್ಗೆ ಮಹತ್ವದ ವಿಚಾರಗೋಷ್ಠಿ "ವೇದಗಳು - ಮಹಿಳೆ" - ಡಾ|| ಇಲಪಾವುಲೂರಿ ಪಾಂಡುರಂಗರಾವ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು ಸ್ತ್ರೀಯರು ವೇದಗಳನ್ನು ವ್ಯಾಸಂಗ ಮಾಡಬಾರದು ಎಂಬುದೊಂದು ಅಪಪ್ರಚಾರ ಮಾತ್ರವೇ ಎಂದೂ, ಸ್ತ್ರೀಯರು ವೇದಗಳ ಅಧ್ಯಯನ ಮಾಡುವಂತೆ ಆದರೆ ಧರ್ಮ ಪ್ರಸಾರ ಸುಲಭ ಹಾಗೂ ಶೀಘ್ರ ಎಂದು ಅವರು ನಿರ್ಧರಿಸಿ ಹೇಳಿದರು



ವಿಚಾರಗೋಷ್ಠಿಯಲ್ಲಿ ತಮ್ಮ ವಿಚಾರವನ್ನು ಮಂಡಿಸಿದ ಪ್ರಾಚಾರ್ಯ ವಿ ಎಸ್ ಝಾ ವೇದಗಳಲ್ಲಿ ಸ್ತ್ರೀ ಪ್ರಾದಾನ್ಯವನ್ನು ವಿವರಿಸಿದರು ಪ್ರಾಚಾರ್ಯ ಕಮಲ ಅವರು ಮಾತನಾಡುತ್ತ ಆಚಾರ ಯೋಗ್ಯವಾದದ್ದು ವೇದವೆಂದು ವೇದಕಾಲೀನ ಮಹಿಳಾ ವೇದವಿದರ ಬಗ್ಗೆ ಹೇಳುತ್ತ ವೈದಿಕ ಕಾಲದಲ್ಲಿ ಸ್ತ್ರೀಯರು ಗಾಯತ್ರಿಯ ಉಪಾಸನೆ ಮಾಡುತ್ತಿದ್ದರೆಂದು ವೇದ, ಪುರಾಣ, ಶಾಸ್ತ್ರಗಳ ಹಿನ್ನೆಲೆಯಲ್ಲಿ ವಿವರಿಸಿದರು ಡಾ|| ಉಜ್ವಲ



ಪ್ರಾ|| ಎಂ. ಎ. ಲಕ್ಷ್ಮೀತಾತಾಚಾರ್ಯ

ಝಾ ಅವರು ವೇದಗಳು - ಯೋಗಿನಿಯರು ಬಗ್ಗೆ ಮಾತನಾಡಿದರು ಶ್ರೀಮತಿ ರಮಣ ಅವರು ಮಾತನಾಡುತ್ತ ವೇದಗಳಲ್ಲಿನ ಸ್ತ್ರೀಯರ ಚಿತ್ರಣ ವನ್ನು ವಿವರಿಸಿದರು ಶ್ರೀ ಸಿ ಎಚ್ ಶಿವ ರಾಮ ಕೃಷ್ಣಶಾಸ್ತ್ರಿ ಅವರು ವಿಚಾರಗೋಷ್ಠಿಯ ಒಟ್ಟು ಸಾರವನ್ನು ವಿಶ್ಲೇಷಿಸಿದರು

ಅಂದು ಮಧ್ಯಾಹ್ನ ಆಗಮ - ಶಿಲ್ಪ ವಿಚಾರ ಗೋಷ್ಠಿ ಕಾರ್ಯಕ್ರಮ ವೇದವಿಜ್ಞಾನ ಸಂಸ್ಥೆಯ ನಿರ್ದೇಶಕ ಡಾ|| ಎಸ್ ಬಿ ರಘುನಾಥಾಚಾ ರ್ಯರ ಅಧ್ಯಕ್ಷತೆ ಈಶಾವಾಸ್ಯಮಿದು ಈ ಜಗವು



ಡಾ|| ಇಲಪಾವುಲೂರಿ ಪಾಂಡುರಂಗರಾವು

ಎಂಬ ತತ್ವವನ್ನು ವಿವರಿಸಿ, ಈಶ ಮೂರ್ತಿಯ ರಚನೆ, ಆರಾಧನೆಗಳೇ ಆಗಮ ಶಿಲ್ಪ ಶಾಸ್ತ್ರಗಳೆಂದು ವಿವರಿಸಿದರು

ಡಾ|| ಎ. ವೇದವ್ಯಾಸ ಅವರು ಹಿಂದೂ ಧರ್ಮದ ಹಿರಿಮೆಯನ್ನು ತಿಳಿಸಿಕೊಟ್ಟು, ಇಂದಿನ ಶಿಕ್ಷಣ ವಿಧಾನದಲ್ಲಿ ಆಗದೇಕಾದ ಪರಿವರ್ತನೆ ಗಳನ್ನು ಕುರಿತು ಮಾತನಾಡಿದರು ಡಾ|| ಐ ಸಿ ಅಜ್ ಅವರು ಆಗಮಗಳು ಶಿಲ್ಪಗಳು ಕೇವಲ ಸಿದ್ಧಾಂತಗಳ ರೂಪದಲ್ಲಿ ಅಲ್ಲದೆ ಸಮಾಜದಲ್ಲಿ ಅವುಗಳ ವಿನಿಯೋಗ ಆಗುತ್ತಿರುವ ವಿಧಾನ ವನ್ನು ವಿವರಿಸಿದರು ಶ್ರೀ ವಿಖನಸ ಭಟ್ಟಾಚಾ ರ್ಯರು ವೈಖಾನಸವನ್ನು ಕುರಿತೂ, ಪ್ರಾ|| ಎಲ್ ಎನ್ ಭಟ್ಟರು ಪಾಂಚರಾತ್ರವನ್ನು ಕುರಿತೂ, ಶ್ರೀ ಎನ್ ಎಂ ಗಣಪತಿಸ್ಥಪತಿಯವರು ಶಿಲ್ಪವೈಶಿಷ್ಟ್ಯ ವನ್ನು ಕುರಿತೂ, ಮಾತನಾಡಿದರೆ, ಶ್ರೀ ಮಾಡಂ ಬಾಕಂ ಶ್ರೀನಿವಾಸ ಭಟ್ಟಾಚಾರ್ಯರು ವೈಖಾನಸ ಆಗಮವನ್ನೂ, ಶ್ರೀ ಎಸ್ ಬಿ ಎಲ್ ನರಸಿಂಹಾ ಚಾರ್ಯರು ಪಾಂಚರಾತ್ರಾಗಮವನ್ನು ಕುರಿತೂ ಸಮೀಕ್ಷೆ ನಡೆಸಿದರು

ನಂತರ ತಿ ತಿ ದೇ ಪ್ರಕಟಿಸಿದ ತೆಲುಗು ಪುಸ್ತಕ 'ಶಿಲ್ಪದರ್ಶನ'ವನ್ನು ತಿ ತಿ ದೇ ಕಾರ್ಯನಿರ್ವ ಹಣಾಧಿಕಾರಿ ಡಾ|| ಐ.ವಿ ಸುಬ್ಬರಾವ್ ಅವರು ಬಿಡುಗಡೆ ಮಾಡಿದರು ತಮಿಳು ಮೂಲದ ಈ ಪುಸ್ತಕವನ್ನು ತೆಲುಗಿಗೆ ಅನುವಾದಿಸಿದ ಶ್ರೀ ನಾಗೇ ಶ್ವರರಾವ್ ಅವರನ್ನು ಅಭಿನಂದಿಸಿದರು

ಕಂಚಿಯ ಶ್ರೀ ಶ್ರೀ ಜಯೇಂದ್ರ ಸರಸ್ವತಿಯ ವರು ಶಿಲ್ಪಕಲೆಯ ಮಹತ್ವವನ್ನು ವಿವರಿಸಿ ಅನು ಗ್ರಹಾಶೀರ್ವಾದ ಮಾಡಿದರು

## ನಾಲ್ಕನೆಯ ದಿನ - 8-7-99

ನಾಲ್ಕನೆಯ ದಿನ 8-7-99 ರಂದು ವೇದಗಳು - ಕಂಪ್ಯೂಟರ್ ವಿಜ್ಞಾನ ವಿಷಯದಲ್ಲಿ ವಿಚಾರ ಗೋಷ್ಠಿ ನಡೆಯಿತು ಅಧ್ಯಕ್ಷತೆ ವಹಿಸಿದ್ದ ಡಾ|| ಓಂ ವಿಕಾಸ್ ಅವರು ಮಾತನಾಡುತ್ತ ಸಂಸ್ಕೃತವು ಸಂಪೂರ್ಣವಾಗಿ ಸಮನ್ವಯ ಭಾಷೆಯಾಗಿ ಕಂಪ್ಯೂಟರಿನಲ್ಲಿ ಬಳಕೆಯಾಗುತ್ತಿದೆ - ಎಂದು ವಿವರಿಸಿದರು ಇಂದು ಕಂಪ್ಯೂಟರ್ ವಿಜ್ಞಾನಿ ಗಳೂ, ವೇದ ಶಾಸ್ತ್ರಜ್ಞರೂ ಒಂದು ಸ್ಥಳದಿಂದ ಒಟ್ಟಿಗೆ ನಡೆಯಬೇಕಾದ ಅಗತ್ಯವಿದೆಯೆಂದೂ, ಇಂದಿನ ವೇದ ಪಾಠಶಾಲೆಗಳಲ್ಲಿ ಪ್ರತಿ ವಿದ್ಯಾ



ಡಾ|| ಎಂ ಎಂ ಅಲೆಕ್ಸ್

ರ್ಥಿಗೂ ಕಂಪ್ಯೂಟರ್ ಶಿಕ್ಷಣ ನೀಡಬೇಕಾಗಿದೆ ಎಂದೂ ಅವಧಾರಿಸಿ ನುಡಿದರು

ಬೆಂಗಳೂರಿನ ಡಾ|| ರಾಮಾನುಜನ್ (ಸಿ ಡಾಕ್) ಭಾರತೀಯ ಭಾಷೆಗಳಲ್ಲಿ ಕಂಪ್ಯೂಟರೀಕರಣ ವಿಧಾನವನ್ನು ವಿವರಿಸಿದರು ಮೇಲು ಕೋಟೆಯ ಪ್ರಾಚಾರ್ಯ ಎಂ ಎ ಲಕ್ಷ್ಮೀ ತಾತಾಚಾರ್ಯರು ವೇದಗಳನ್ನು ಕಂಪ್ಯೂಟರೀಕರಿಸುವ ಅಗತ್ಯವನ್ನು ಕುರಿತು ಮಾತನಾಡಿದರು ಪ್ರಾಚಾರ್ಯ ಕೆ ವಿ ಆರ್ ಕೃಷ್ಣಮಾಚಾರ್ಯರು ಹೊಸ ಹೊಸ ಹಿನ್ನೆಲೆಯಲ್ಲಿ ಕಂಪ್ಯೂಟರ್‌ಗಳ



ಓಂ ವಿಕಾಸ್




ಬಳಕೆಯನ್ನು ವೇದಗಳ ಪ್ರಸಾರದಲ್ಲಿ ಕಂಪ್ಯೂಟರ್‌ಗಳ ಪಾತ್ರವನ್ನು ವಿವರಿಸಿದರು ಹೈದರಾಬಾದಿನ ಆರ್ ವಿ ಎಸ್ ಎಸ್ ಅವದಾನಿ ಅವರು ವೇದಗಳನ್ನು ಸ್ವರ ಸಹಿತ, ಚಿತ್ರಸಹಿತ ಹೇಗೆ ಕಂಪ್ಯೂಟರೀಕರಣಗೊಳಿಸಲಾಗಿದೆ ಎಂಬುದನ್ನು ದೃಶ್ಯಚಿತ್ರಗೊಳಿಸಿ ತಿಳಿಸಿದರು

## ಸಮಾರೋಪ ಸಮಾರಂಭ

ಶತ ಜಯಂತಿ ಉತ್ಸವಗಳ ಸಂದರ್ಭವಾಗಿ ಏರ್ಪಾಡಾಗಿದ್ದ ವೇದಾಗಮ ಸಮ್ಮೇಳನದ ಸಮಾರೋಪ 8-7-99 ರ ಸಂಜೆ ನಡೆಯಿತು. ಅಧ್ಯಕ್ಷತೆ ವಹಿಸಿದ್ದ ಡಾ|| ಐ ವಿ ಸುಬ್ಬಾರಾವು ಅವರು ಮಾತನಾಡುತ್ತ ವೇದ ಪರಿರಕ್ಷಣೆ ಪ್ರಸಾರದಲ್ಲಿ ಮಾಡದೇಕಾದ ಕೆಲಸಗಳು ಬಹಳಷ್ಟಿವೆಯೆಂದೂ, ಕೀಸರ ಗುಟ್ಟ, ಹೈದರಾಬಾದು, ಧರ್ಮಗಿರಿಗಳಲ್ಲಿನ ವೇದ ಪಾರಶಾಲೆಗಳನ್ನು ಅಭಿವೃದ್ಧಿಗೊಳಿಸುವುದಾಗಿಯೂ ನುಡಿದರು




ಪ್ರಾಚಾರ್ಯ ರಮಾರಂಜನ ಮುಖರ್ಜಿ ತಿ ತಿ ದೇ ಗಳ ಕಾರ್ಯ ಬಾಹುಳ್ಯವನ್ನೂ, ಕಾರ್ಯಗುಣವನ್ನೂ ಶ್ಲಾಘಿಸುತ್ತ ಕಾಶಿಯಂತಹ ಸ್ಥಳದಲ್ಲಿಯೂ ಇಂತಹ ಸಮ್ಮೇಳನಗಳು ನಡೆಯುತ್ತಿಲ್ಲವೆಂದೂ, ತಿ ತಿ ದೇ ಗಳ ಪ್ರಯತ್ನಗಳು ಮುಂದೆ ಮುಂದೆ ವೇದ ಪರಿರಕ್ಷಣೆ ಪ್ರಸಾರಗಳಲ್ಲಿ ಮತ್ತೂ ಹೆಚ್ಚಿನ ಮಹತ್ವದ್ದಾಗಿ ಮೂಡಿಬರಲಿ ಎಂದು ಹಾರೈಸಿದರು

ಪ್ರಾಚಾರ್ಯ ಮಂಡನ ಮಿಶ್ರ ಅವರು ಮಾತನಾಡುತ್ತ ಇಲ್ಲಿ ನಡೆದ ವಿಚಾರಗೋಷ್ಠಿಗಳಲ್ಲಿ ಮಥಿತವಾದ ಜ್ಞಾನ ನವನೀತದಿಂದ ಹೊಸ ಹೊಸ ಕಾರ್ಯಯೋಜನೆಗಳನ್ನು ಸಾಧ್ಯವೆಂದೂ ತಿ ತಿ ದೇ ಅವುಗಳ ಬಗ್ಗೆ ಕಾರ್ಯೋನ್ಮುಖವಾಗಬೇಕೆಂದೂ ಕರೆ ನೀಡಿದರು

ಧರ್ಮಪ್ರಚಾರ ಪರಿಷತ್ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯನವರು ಆಂಗ್ಲ ಸಂಸ್ಕೃತ ಭಾಷಾ ಉಪನ್ಯಾಸಕರ ಮಾತಿನ ಸಾರವನ್ನು ತೆಲುಗಿನಲ್ಲಿ ವಿವರಿಸಿದರು



ನಾಲ್ಕು ದಿನದ ವೇದಾಗಮ ಶಿಲ್ಪ ಸದಸ್ಸನ್ನು ನಿರ್ವಹಿಸಿದ ವೇದವಿಜ್ಞಾನ ಸಂಸ್ಥೆ ನಿರ್ದೇಶಕರು ಡಾ|| ಎಸ್. ಬಿ ರಘುನಾಧಾಚಾರ್ಯರು ವಂದಿಸಿದರು ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಜೀ ಅನುಗ್ರಹ ಭಾಷಣ ಮಾಡಿದರು ಶ್ರೀನಿವಾಸಾವಿರ್ಭಾವ, ಸಂಸ್ಕೃತನಾಟಕ ನಡೆಯಿತು

## ವೇದಕಥಾಭಾರತಿಯ ಪುಸ್ತಕಗಳು

ವೇದಾಗಮ ಶಿಲ್ಪ ಶಾಸ್ತ್ರ ಸಮ್ಮೇಳನದಲ್ಲಿ ವೇದಕಥಾಭಾರತಿಯ ಇಪ್ಪತ್ತೊಂದು ತೆಲುಗು ಪುಸ್ತಕಗಳನ್ನು ಬಿಡುಗಡೆ ಮಾಡಲಾಯಿತು ಈ ಕಿರು ಪುಸ್ತಕಗಳು ಪ್ರತಿಯೊಂದೂ ನಾಲ್ಕುರೂಪಾಯಿಗಳಾಗಿದ್ದು ಇವುಗಳ ವಿವರ ಹೀಗಿದೆ-

1 ದಧ್ಯಂಗ ಮಹರ್ಷಿ
2 ಶುನಶ್ಯೇಪುಡು
3 ಅಪಾಲ
4 ಸತ್ಯಕಾಮ ಜಾಬಾಲಿ
5 ಉದ್ದಾಲಕ ಮಹರ್ಷಿ
6 ಯಾಜ್ಞವಲ್ಕ್ಯ ಮಹರ್ಷಿ
7 ಭೃಗುಮಹರ್ಷಿ
8. ಕಣ್ವ ಮಹರ್ಷಿ
9 ನಹುಷುಡು
10 ವಿಶ್ವಾಮಿತ್ರ ಮಹರ್ಷಿ
11 ಶ್ಯಾವಾಶ್ವ ಮಹರ್ಷಿ
12 ಗಾರ್ಗಿ
13 ವಾಮದೇವ ಮಹರ್ಷಿ
14 ಘೋಷ
15 ಚ್ಯವನ ಮಹರ್ಷಿ
16 ಅಶ್ವಿನೀ ದೇವತಲು
17 ಸರಮ
18 ನಚಿಕೇತುಡು
19 ರೈಕ್ವುಡು
20 ಅಗಸ್ತ್ಯ ಮಹರ್ಷಿ.
21 ವಶಿಷ್ಠ ಮಹರ್ಷಿ.



ಸಂದರ್ಶಿಸಿ ಆರಾಧಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

# ತಿರುಮಲೆ



# ನವರಾತ್ರಿ ಬ್ರಹ್ಮೋತ್ಸವಗಳು

## 10-10-99 ರಿಂದ 19-10-99 ವರೆಗೆ

ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 10-10-99 | ಭಾನುವಾರ | - | ಸೇನಾಪತಿ ಉತ್ಸವ, ಅಂಕುರಾರ್ಪಣೆ |
| 11-10-99 | ಸೋಮವಾರ | ತಿರುಚ್ಚಿ ಉತ್ಸವ | ದೊಡ್ಡಶೇಷವಾಹನ |
| 12-10-99 | ಮಂಗಳವಾರ | ಚಿಕ್ಕಶೇಷವಾಹನ | ಹಂಸವಾಹನ |
| 13-10-99 | ಬುಧವಾರ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 14-10-99 | ಗುರುವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 15-10-99 | ಶುಕ್ರವಾರ | ಮೋಹಿನೀ ಅವತಾರ | ಗರುಡವಾಹನ |
| 16-10-99 | ಶನಿವಾರ | ಹನುಮಂತವಾಹನ<br>ಸಂಜೆ ಸುವರ್ಣರಥ<br>ವಸಂತೋತ್ಸವ | ಗಜವಾಹನ |
| 17-10-99 | ಭಾನುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 18-10-99 | ಸೋಮವಾರ | (ರಜತ)ರಥೋತ್ಸವ | ಅಶ್ವವಾಹನ |
| 19-10-99 | ಮಂಗಳವಾರ | ಚಕ್ರಸ್ನಾನ | ತಿರುಚ್ಚಿವಾಹನ |

ಸೂಚನೆ ದಿನವೂ ಬೆಳಗಿನಿಂದ ರಾತ್ರಿಯವರೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳುಂಟು ಧರ್ಮಗ್ರಂಥಗಳ ಮಾರಾಟವುಂಟು

**ನೀವೂ ಬನ್ನಿ** **ತಿ.ತಿ.ದೇ.** **ನಿಮ್ಮವರನ್ನೂ ಕರೆತನ್ನಿ**

Edited and Published on behalf of T T Devasthanams by Dr N S Rama Murthy, M A , and Printed at T T D Press
by M Lakshmana Rao, M A , L P T , Manager, T T D Press, Tirupati - 517 507

# ತಿರುಮಲೆ - ತಿರುಪತಿ ದೇವಸ್ಥಾನಗಳು, ತಿರುಪತಿ.



# ಬರ್ಡ್

## ಸಾರ್ಥಕ ಸೇವೆಯ ಆದರ್ಶ :

ಅಂಗವಿಕಲರ ಪುನರಾವಾಸ, ಪರಿಶೋಧನೆ, ಶಸ್ತ್ರಚಿಕಿತ್ಸೆಗಳ ಬಾಲಾಜಿ ಆಸ್ಪತ್ರೆಯು (ಬಾಲಾಜಿ ಇನ್‌ಸ್ಟಿಟ್ಯೂಟ್ ಆಫ್ ಸರ್ಜರಿ ರಿಸರ್ಚ್ ಅಂಡ್ ರಿಹ್ಯಾಬಿಲಿಟೇಷನ್ ಫಾರ್ ದಿ ಡಿಸೇಬಲ್ಡ್) ಮಾನವ ಸೇವೆಯ ಮೂಲಕ ಮಾಧವ ಸೇವೆಯನ್ನು ನಡೆಸುವ ತಿ ತಿ ದೇವಸ್ಥಾನಗಳ ಆದರ್ಶ ವಂತಿಕೆಗೆ ಸಾಕ್ಷಿಯಾಗಿ ಅಂಗವಿಕಲರ ಸೇವೆಯಲ್ಲಿ ನಿರತವಾಗಿದೆ

1985 ರಲ್ಲಿ ಸ್ಥಾಪನೆಯಾದ ಬರ್ಡ್ ಸಂಸ್ಥೆ ಅಂಗ ರಚನಾ ಶಾಸ್ತ್ರ ಕ್ಷೇತ್ರದಲ್ಲಿ ಹಲವು ರೀತಿಯ ಹೊಸ ಹಾದಿಗಳನ್ನುಂಟುಮಾಡಿದೆ ಪೋಲಿಯೊ ಪೀಡಿತರು, ಜನ್ಮಾರಭ್ಯ ನ್ಯೂನತೆಗಳು, ಮಿದುಳ ಪಕ್ಷವಾತಗಳ ಮೂಲಕ ವಿಕಲಾಂಗರಾದ ರೋಗಿಗಳಿಗೆ ಉತ್ತಮವಾದ ಚಿಕಿತ್ಸೆಯನ್ನು ನೀಡುವ ಈ ಆಸ್ಪತ್ರೆ ಬಡ ಜನತೆಯ, ಅಗತ್ಯವಿದ್ದವರ ಸೇವೆಯಲ್ಲಿ ಸಮರ್ಪಿತವಾಗಿದೆ



## ಬರ್ಡ್‌ನ ಕೆಲವು ಸಾಧನೆಗಳು, ಅಗತ್ಯಗಳು, ಅನುಕೂಲಗಳು.

* ಬೆನ್ನು ಹುರಿಯ ಘಾಯದ ಚಿಕಿತ್ಸೆಯಲ್ಲಿ ಸದಾಸಿದ್ಧ ಯಂತ್ರೋಪಕರಣಗಳ ಬಳಕೆ
* ಎರಡು ಲಕ್ಷಕ್ಕೂ ಹೆಚ್ಚು ಮಂದಿಯ ಸಫಲ ಚಿಕಿತ್ಸೆಯಾಗಿದೆ
* 300 ಒಳರೋಗಿಗಳ ಹಾಸಿಗೆಗಳ ಚಿಕಿತ್ಸೆಗೆ ಅವಕಾಶವಿರುವ ಕೇಂದ್ರೀಕೃತ ಹವಾನಿಯಂತ್ರಿತ ಆಸ್ಪತ್ರೆ, ನಾಲ್ಕು ಶಸ್ತ್ರ ಚಿಕಿತ್ಸಾ ಕೋಣೆಗಳು
* ಕೃತಕ ಅಂಗಾಂಗಳ, ಆಧಾರಗಳ, ಆಲಂಬನಗಳ ಉಚಿತ ವಿತರಣೆ
* ಬರ್ಡ್‌ಗಾಗಿ ನೀಡುವ ಎಲ್ಲ ದಾನಗಳೂ ಆದಾಯಕರ ನಿಯಮದ 80 (ಜಿ) ಕಲಮಿನ ಪ್ರಕಾರ ಆದಾಯ ಕರಮುಕ್ತವಾಗಿರುವುವು.
* ಐದು ಲಕ್ಷ ರೂಪಾಯಿ ಹಾಗೂ ಹೆಚ್ಚಿಗೆ ದಾನ ನೀಡಿದವರ ಹೆಸರಿನೊಡನೆ ಇರುವ ಭಾವಚಿತ್ರವನ್ನು ಬರ್ಡ್ ಆಸ್ಪತ್ರೆಯಲ್ಲಿ ಪ್ರದರ್ಶಿಸಲಾಗುವುದು
* ವರ್ಷಕ್ಕೆ ಒಮ್ಮೆ ಮೂರುದಿನ ದಾನಿಗಳ ಐದುಮಂದಿಗೆ ತಿರುಮಲೆಯಲ್ಲಿ ಉಚಿತದರ್ಶನ, ಸ್ವಾಮಿಯ ಆರತಿ ನೀಡಲಾಗುವುದು
* ಹತ್ತು ಲಕ್ಷ ರೂಗಳು ಹಾಗೂ ಹೆಚ್ಚಿನ ದಾನ ನೀಡುವವರ ಹೆಸರನ್ನು ಒಂದು ಕೋಣೆಗೆ ಇಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬೆಳ್ಳಿಯ ಚಿತ್ರದ ಜ್ಞಾಪಿಕೆಯನ್ನು ಐದು ಲಕ್ಷ, ಹತ್ತು ಲಕ್ಷ ರೂಪಾಯಿಗಳ ದಾನಿಗಳಿಗೆ ನೀಡಲಾಗುವುದು

ದಾನಿಗಳು ಉದಾರವಾಗಿ ನೀಡುವ ದಾನಗಳನ್ನು ಬರ್ಡ್‌ನ ವಿವಿಧ ಯೋಜನೆಗಳಲ್ಲಿ ತೊಡಗಿಸಲಾಗುವುದು ಕೃತಕ ಅಂಗಾಂಗಗಳ ಉತ್ಪಾದನೆ ವಿತರಣೆಗೆ, ರೋಗಿಗಳ ಉಚಿತ ಭೋಜನ ರಿಯಾಯಿತಿ ದರಗಳ ಪ್ರಯಾಣ ವೆಚ್ಚಗಳಿಗೆ ಬಳಸಲಾಗುವುದು ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ, ಬರ್ಡ್ ಟ್ರಸ್ಟ್, ತಿ ತಿ ದೇವಸ್ಥಾನಗಳು, ತಿರುಪತಿ - ಇವರ ಹೆಸರಿಗೆ ಕಳುಹಿಸಬಹುದು

ಕಾರ್ಯನಿರ್ವಹಣಾಧಿಕಾರಿ,

ತಿ ತಿ ದೇವಸ್ಥಾನಗಳು, ತಿರುಪತಿ - 517 501

